* ಮುರಗೋಡ ಮಲ್ಲಿಗೆಯ ದ್ವಿತೀಯ ಪುಷ್ಪ *

# ವಿಕಾಸ ಗೀತೆಗಳು



卐





ಸಂಗ್ರಾಹಕರು :

ಜನಪದ ಸಾಹಿತ್ಯರತ್ನ, ಸಭಾಭೂಷಣ, ರೆಡಿಯೊ ಗಾಯಕ

**ಶ್ರೀ ಬಾಳಪ್ಪ ವೀರಭದ್ರಪ್ಪ ಹುಕ್ಕೇರಿ**

ಮುರಗೋಡ






卐

[ ೧೯೫೮

* ಮುರಗೋಡ ಮಲ್ಲಿಗೆಯ ದ್ವಿತೀಯ ಪುಷ್ಪ *

# ವಿಕಾಸ ಗೀತೆಗಳು




ಸಂಗ್ರಾಹಕರು :

ಜನಪದ ಸಾಹಿತ್ಯರತ್ನ, ಸಭಾಭೂಷಣ, ರೆಡಿಯೊ ಗಾಯಕ

**ಶ್ರೀ ಬಾಳಪ್ಪ ವೀರಭದ್ರಪ್ಪ ಹುಕ್ಕೇರಿ**

ಮುರಗೋಡ





ಬೆಲೆ: ೧-೦೦]



[ ೧೯೫೮

ಪ್ರಕಾಶಕರು :
ವರ್ತಕ ವಿಭೂಷಣ;
ಶ್ರೀ ಬಸಪ್ಪ ಗೋವಪ್ಪ ಹುಕ್ಕೇರಿ, ಬಂಧುಗಳು
ಮುರಗೋಡ. ಜಿ. ಬೆಳಗಾಂವ





[ ಮೊದಲನೆಯ ಆವೃತ್ತಿ ೧೦೦೦ ಪ್ರತಿಗಳು ]




ಮುದ್ರಕರು :
ಎಸ್. ವಾಯ್. ಪವಾರ
ಧಾರವಾಡ ಪ್ರಿಂಟಿಂಗ ಪ್ರೆಸ್
ಧಾರವಾಡ



ನೀರು ಮಣ್ಣು ಬೀಜಗಳ ಅಭಿವೃದ್ಧಿಯ ಮೂಲಕ
ನಮ್ಮ ಒಕ್ಕಲತನವೂ ವನಗಳೂ ವಿಕಾಸಗೊಂಡು,
ತನ್ಮೂಲಕ ಕನ್ನಡನಾಡಿನ ಗ್ರಾಮಗಳು ಏಳಿಗೆಹೊಂದಿ,
ಶಿಕ್ಷಣ ಆರೋಗ್ಯಗಳಿಂದ
ಜನರ ಮಾನಸ ಜೀವನ ಅರಳಿ ಮಗಮಗಿಸಲಿ
ಎಂದು ಹಾಡಿದ ಈ
ಲಾವಣಿ, ಭಾವಗೀತ, ಜಾನಪದಗೀತೆಗಳ
ರೂಪದಲ್ಲಿರುವ ಈ
" ವಿಕಾಸ ಗೀತೆಯು " ಪದಹಾರವನ್ನು
ಭಕ್ತಿ ಪುರಸ್ಸರವಾಗಿ
ಶ್ರೀಮನ್ನಿರಂಜನ ಪ್ರಣವಸ್ವರೂಪರಾದ
ಶ್ರೀಮೃತ್ಯುಂಜಯ ಮಹಾಸ್ವಾಮಿಗಳ
ಚರಣ ಸನ್ನಿಧಿಗೆ ಸಮರ್ಪಿಸುತ್ತೇನೆ.

—ಬಾಳಪ್ಪ ಹುಕ್ಕೇರಿ

# ಮಮತೆಯ ನುಡಿಗಳು

ಶ್ರೀ ಹುಕ್ಕೇರಿ ಬಾಳಪ್ಪನವರ 'ವಿಕಾಸ ಗೀತೆಗಳು' ನಾಡಿನ ಅಭ್ಯುದಯದ ವಿಕಾಸವನ್ನು ಸಾಧಿಸುವವಲ್ಲದೆ, ವಿಕಾಸಾನುಕೂಲ ಮನದ ಉನ್ನತಿಗೂ ಸಾಧಕವಾಗಿವೆ. ಇದೊಂದು ಬಗೆಯ ಲೋಕಸಂಗ್ರಹ. ತಮ್ಮ ಹಾಡುಗಳಂತೆ ತಮ್ಮ ಮಿತ್ರರ ಹಾಡುಗಳನ್ನೂ ಸಂಗ್ರಹಿಸಿದ್ದಾರೆ, ತಾವು ಮೆಚ್ಚಿದ ಕೆಲವು ಹಾಡುಗಳನ್ನೂ ಸಂಗ್ರಹಿಸಿದ್ದಾರೆ. ಈ ಸಂಗ್ರಾಹಕ ಬುದ್ಧಿ ಬಾಳಪ್ಪನವರ ಸುಸಂಸ್ಕೃತಿಯ ದ್ಯೋತಕವಾಗಿದೆ. ಬಾಳಪ್ಪನವರ ಹಾಡಿಕೆಯನ್ನು ಮೆಚ್ಚದವರಾರು? ಮೆಚ್ಚಿದ ಮೇಲೆ ಅದನ್ನು ಬಿಚ್ಚಿ ಹಾಡಿದವರೂ ಉಂಟು. ಅವರ **'ಧ್ವನಿ'** ದೇವತಾ ಕೃಪಾಪ್ರಸಾದ ಈ ಧ್ವನಿಯಿಂದ ಅಭ್ಯುದಯ, ಶ್ರೇಯಸ್ಸು ಎರಡರ ಸಂಪಾನೆಯೂ ಆಗಲಿ ಇಹ-ಪರ ಸಾಮರಸ್ಯ ಧರ್ಮನೆಲೆಗೊಳ್ಳಲಿ. 'ವಿಕಾಸಗೀತಗಳ'ನ್ನು ಹಾಡಿಸಿ ಕೇಳಿದವರು ಅವರ ಇನ್ನು ಮುಂದಿನ ಕೃತಿಗಳನ್ನೂ ಬರಮಾಡಿಕೊಳ್ಳುವರು ಎಂದು ನಾನು ನಂಬಿದ್ದೇನೆ.

ಸಾಧನಕೇರಿ
ಧಾರವಾಡ ೨೪-೮-೫೮

ಕವಿವರ್ಯ
**ದ. ರಾ. ಬೇಂದ್ರೆ,** ಎಂ. ಎ.

## ಅರಿಕೆ

ನನ್ನ 'ವಿಕಾಸ ಗೀತೆಗಳು' ಎಂಬ ಕವನ ಸಂಗ್ರಹದ ಪುಸ್ತಕವನ್ನು ತಯಾರಿಸುವ ಬಗ್ಗೆ ನನಗೆ ವೇಳೆಯ ಅಭಾವದ ಮೂಲಕ ನನ್ನ ಕೆಲ ಮಿತ್ರರು ( ಕವಿಗಳು ಹಾಗೂ ಶಿಕ್ಷಕರು) ರಚಿಸಿದ ಕವನಗಳನ್ನು ಇದರಲ್ಲಿ ಸಂಕಲನ ಮಾಡುವಾಗ್ಗೆ ಅವರ ಒಪ್ಪಿಗೆ ಪಡೆಯಲಿಲ್ಲ. ಅದಕ್ಕಾಗಿ ಅವರ ಕ್ಷಮೆ ಬೇಡುತ್ತೇನೆ ಹಾಗು ಅವರ ಉಪಕಾರ ಸ್ಮರಿಸುತ್ತೇನೆ.

ನನ್ನ ಪುಸ್ತಕವನ್ನು ಸಕಾಲಕ್ಕೆ ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟ, ಧಾರವಾಡ ಪ್ರಿಂಟಿಂಗ ಪ್ರೆಸ್ಸಿನ ಒಡೆಯರಿಗೂ ಹಾಗು ಕೆಲಸಗಾರರಿಗೂ, ಹೆಚ್ಚು ಶ್ರಮವಹಿಸಿ ಕೆಲಸಮಾಡಿ ಕೊಟ್ಟಿದ್ದಕ್ಕೆ ಅವರ ಉಪಕಾರವನ್ನು ಮರೆಯಲಾರೆನು.

**—ಬಾಳಪ್ಪಾ ವಿ. ಹುಕ್ಕೇರಿ**

# ಮುನ್ನುಡಿ

—::—

ಶ್ರೀ|| ಮ|| ನಿ|| ಪ್ರ|| **ಮೃತ್ಯುಂಜಯ ಮಹಾಸ್ವಾಮಿಗಳವರ** ಅಮೃತ ಹಸ್ತದಿಂದ ಧಾರವಾಡ ಡಿವ್ಹಿಜನ್ ಒಕ್ಕಲುತನ ಖಾತೆಯ ಪ್ರಚಾರಕರಾದ ಶ್ರೀ ಬಾಳಪ್ಪ ಹುಕ್ಕೇರಿ ಅವರು “ **ವಿಕಾಸ ಗೀತೆಗಳು** ” ಎಂಬ ಪುಸ್ತಕವನ್ನು ಪ್ರಕಟಿಸುತ್ತಿರುವದು ಅಭಿನಂದನೀಯ. ಹಲವಾರು ಸಭಾ ಸಮಾರಂಭಗಳಲ್ಲಿ ಇವರ ಪ್ರವಚನ ಗಾನ ಮಾಧುರ್ಯವನ್ನು ಆಸ್ವಾದಿಸಿದ್ದೇನೆ, ಆ ಗಾನ ಗಂಗಾ ಪ್ರವಾಹದಲ್ಲಿ ಗ್ರಾಮೀಣ ಬಾಂಧವರು ಮಿಂದು ಮೋದಗೊಂಡದ್ದನ್ನು ನೋಡಿದ್ದೇನೆ.

ಅನ್ನ, ಅರಿವೆ, ಆಶ್ರಯ, ಆರೋಗ್ಯ, ಅಕ್ಷರ, ಅರಿವು ಇವು ಸಮಾಜದ ಸರ್ವೋದಯ ಪಂಚಶೀಲಗಳು. ಈ ಶೀಲಗಳ ಸಂವರ್ಧನೆಗಾಗಿ ಭಾರತ ಸರಕಾರವು ಪ್ರಥಮ ಮತ್ತು ದ್ವಿತಿಯ ಪಂಚವಾರ್ಷಿಕ ಯೋಜನೆಗಳನು ಹಲವಾರು ರೀತಿಗಳಲ್ಲಿ ಕಾರ್ಯರಂಗಕ್ಕಿಳಿಸಿರುತ್ತದೆ. ಈ ಕಾರಣದಿಂದಲೇ ಅನೇಕ ಸಂಘ-ಸಂಸ್ಥೆಗಳು ಸಮಾಜ ವಿಕಾಸ ಯೋಜನೆ ರಾಷ್ಟ್ರೀಯ ವಿಸ್ತರಣಾ ಯೋಜನೆ ಮುಂತಾಗಿ ಕಲ್ಯಾಣ ರಾಷ್ಟ್ರವನ್ನು ಕಟ್ಟುವ ಕಾರ್ಯಗಳು ದೇಶದಾದ್ಯಂತ ಆರಂಭವಾಗಿವೆ.

ಇವೆಲ್ಲವುಗಳಿಗೂ “ ಕೃಷಿಕರ್ಮ ” (ಒಕ್ಕಲತನವು), ಭದ್ರ ಬುನಾದಿಯಾಗಿದೆ. ಭಾರತದ ಜನವಸತಿಯಲ್ಲಿ ಸುಮಾರು ಮುಕ್ಕಾಲು ಪಾಲು ಹಳ್ಳಿಗಳಲ್ಲಿ ಅರ್ಧಕ್ಕಿಂತ ಹೆಚ್ಚು ಜನರು ಒಕ್ಕಲತನವನ್ನು ಅವಲಂಬಿಸಿರುತ್ತಾರೆ. ಕಾರಣ ಎಲ್ಲ ಜನತೆಗೆ “ ಅನ್ನ ಅರಿವೆ ಆಸರ ” ಸಾಮಾನ್ಯವಾಗಿ ಲಭಿಸಬೇಕೆಂದೇ ಎರಡೂ ಪಂಚವಾರ್ಷಿಕ ಯೋಜನೆಗಳಲ್ಲಿ, ನಮ್ಮ ಸರಕಾರವು ಒಕ್ಕಲತನ ಸುಧಾರಣೆಗೆ ಹೆಚ್ಚು ಪ್ರಾಶಸ್ತಿ ಕೊಟ್ಟು ಸಾಹಿತ್ಯ ಸಂಗೀತ ಮೊದಲಾದ ಕ್ರಮಗಳಿಂದ ಪ್ರಚಾರ ನಡೆಸಿದೆ.

ಉತ್ತರ ಕರ್ನಾಟಕದ (ಧಾರವಾಡ ಡಿವ್ಹಿಜನ್) ಒಕ್ಕಲತನ ಖಾತೆಯ ಪ್ರಚಾರಕರಾದ ಶ್ರೀ ಬಾಳಪ್ಪಾ ಹುಕ್ಕೇರಿಯವರು ಹಳ್ಳಿಗರೊಡನೆ ಹಳ್ಳಿಗರಾಗಿ ಒಕ್ಕಲಿಗರೊಡನೆ ಒಡನಾಡಿಯಾಗಿ ನಡೆಯಿಂದಲೂ ನುಡಿಯಿಂದಲೂ ಹಾಡುಗಾರಿಕೆಯಿಂದಲೂ ಅವರೆಲ್ಲರ ಎದೆಯಲ್ಲಿ ಒಕ್ಕಲತನ ಸುಧಾರಣೆಯ ಸರ್ವ ವಿಧಾನಗಳನ್ನು ಅಚ್ಚೊತ್ತಿಬಿಡುತ್ತಾರೆ. ಹಳ್ಳಿಗರ ಅಚ್ಚು ಮೆಚ್ಚಿನ ಈ ಪ್ರಚಾರಕರಿಗೆ ಶ್ರೀ|| ನಿ|| ಪ್ರ|| ಸ್ವಾ|| ನವಿಲುಗುಂದದ ಬಸವಲಿಂಗ ಸ್ವಾಮಿಗಳು **“ ಜನಪದ ಸಾಹಿತ್ಯ ರತ್ನ ”** ವೆಂತೂ ಹುಬ್ಬಳ್ಳಿಯಲ್ಲಿ ಪ್ರದರ್ಶನದವರು **“ ಸಭಾ ಭೂಷಣ ”** ವೆಂದೂ ಪದವಿಗಳನ್ನು ದಯಪಾಲಿಸಿದುದು ಸಾರ್ಥಕವೆನ್ನಬೇಕು.

ಶ್ರೀ ಬಾಳಪ್ಪನವರ ಕಾರ್ಯಕ್ಷೇತ್ರವು ಪ್ರಸಂಗಾನುಸಾರವಾಗಿ ಸಹಕಾರ, ಶಿಕ್ಷಣ, ಆರೋಗ್ಯ ವಿಕಾಸ ಯೋಜನೆ ಮುಂತಾದ ಅನೇಕ ಸಭೆಗಳವರೆಗೂ ವಿಸ್ತರಿಸಿದೆ.

ಈ ಎಲ್ಲ ಬಗೆಯ ಸಭಾ ಸಮಾರಂಭಗಳಲ್ಲಿ ಸರಸ ಸಾಹಿತ್ಯ ಸಂಗೀತದಲ್ಲಿ ಮನೋಹರವಾದ ಶೈಲಿಯಲ್ಲಿ ಹಾಡುತ್ತಿರುವ ಪದ ಪದ್ಯಗಳ ಸಂಗ್ರಹವೇ ಈ “ ವಿಕಾಸ ಗೀತೆಗಳು ” ಹಳ್ಳಿಗರೂ, ಪಟ್ಟಣಿಗರೂ ಕಲಿತವರು, ಕಲಿಯದವರು ಈ ಪದ್ಯಗಳನ್ನು ಹಾಡಿ ಹಾಡಿ ಹಿಗ್ಗಲಿ! ತನ್ಮೂಲಕ ಕಲ್ಯಾಣ ರಾಜ್ಯ ಕಟ್ಟಲಿ.

ಧಾ ರ ವಾ ಡ .
೧೭—೮—೧೯೫೮

ವ್ಹಿ. ಎಸ್. ಹಿರೇಮಠ,
M.A.,LL.B.
ಧಾರವಾಡ ಜಿಲ್ಲೆಯ ಡೆ. ಕಮಿಶನರ್

# ಹಾರಯಿಕೆ-ಹರಕೆ

೧೯೫೦ ನೆಯ ಇಸ್ವಿಯಲ್ಲಿ ಧಾರವಾಡದೊಳಗೆ ಕೂಡಿದ ಕನ್ನಡ ಸಾಹಿತ್ಯ ಸಮ್ಮೇಲನದ ಅಂಗವಾಗಿ ಕಾವ್ಯವಾಚನ ಕಾರ್ಯಕ್ರಮ ನಡೆದಿತ್ತು. ತುಂಬು ಹರೆಯದ, ತುಂಬು ಮೈಕಟ್ಟಿನ ವ್ಯಕ್ತಿಯೊಂದು ಗಣಪತಿ ಸ್ತವನ ವನ್ನು, ಹಾಡಿತು,

ನಾದ ತನ್ಮಯತೆಯಲ್ಲಿ ಸಾಭಿನಯವಾಗಿ, ಗೀತ ಸಾಗಿತ್ತು. ಶ್ರೋತ ಗಳಲ್ಲಿ ಸಾಮಾನ್ಯರು ಹಾಗಿರಲಿ, ಸನ್ಮಾನ್ಯ ಸಾಹಿತ್ಯಕರು ಕೂಡಾ ಬೆರಗು ಗಣ್ಣಗಳಿಂದ ನೋಡುತ್ತಿದ್ದರು.

ಕಿವಿಯರಳಿಸಿ ಕೇಳುತ್ತಿದ್ದರು. ಆ ವ್ಯಕ್ತಿ " ಮುರಗೋಡ ಬಾಳಪ್ಪ" ಎಂದು ನಿರ್ದೇಶಕರು ಕೊನೆಯಲ್ಲಿ ಹೇಳಿದರು.

ಮುಂದೊಮ್ಮೆ ಆಕಾಶವಾಣಿಯಲ್ಲಿ, ಅಕಸ್ಮಾತ್ತಾಗಿ ಹಾಡುಗಾರಿಕೆ ಯನ್ನು ಕೇಳಿದೆ, ಅದೇ ಸರಸ ಗಂಭೀರ ಧ್ವನಿ; ಅದೇ ಭಾವ ತನ್ಮಯತೆ ಕಾರ್ಯಕ್ರಮದ ಕೊನೆಯಲ್ಲಿ ಹಾಡಿದವರು " ಹುಕ್ಕೇರಿ ಬಾಳಪ್ಪ " ಎಂದರು ಸರಿ. ಅಡ್ಡ ಹೆಸರು ಎರಡು ಉದ್ದ ಹೆಸರು ಮಾತ್ರ ಒಂದೇ.

ಮುಂದೆ ನಮ್ಮಿಬ್ಬರ ಪರಿಚಯವಾಯಿತು. ಶ್ರೀ ಬಾಳಪ್ಪಾ ಒಕ್ಕಲು ತನದ ಖಾತೆಯ ಪ್ರಚಾರ ಪಟುಗಳು ಹೊಟ್ಟೆಯ ಹೋರಾಟದೊಡನೆ ಹೃದಯದ ಹಂಬಲವನ್ನು ಬೆರಸಿ ಸಂಗ್ರಹಿಸಿದ ಪದ ಪದ್ಯಗಳ ಸಂಕಲನವೇ **ಈ ವಿಕಾಸಗೀತೆಗಳ ಹೊತ್ತಿಗೆ,**

ಇದು ಹಾಡುಗಳ ಹೂಮಾಲೆ, ಬಾಳಿನ ಬೆಡಗು ಬೆಳಕುಗಳಿಗೆ ಬೇಕಾದ ಅಂದ ಚಂದದ ಹೂಗಳಿಂದ ಹೆಣೆದ ಮಾಲೆ. ಯಾರು ಬೇಕಾದವರೂ ಮುಡಿದು ಮೆರೆಯಬಹುದು.

ಈ ಸರಸ ಸಾಹಿತ್ಯ ಕೃತಿ ಶ್ರೀ. ಶ್ರೀ. ಶಿವಯೋಗಿಗಳ ಶುಭಾಶೀರ್ವಾದ ಹೊಂದಿ ಬೆಳಕಿಗೆ ಬರುತ್ತದೆ. ಆದೇ ಸಮಯವನ್ನು, ಸಾಧಿಸಿ ನಾನೂ ಕೂಡಾ ಹುಕ್ಕೇರಿ ಬಾಳಪ್ಪಾ ಉಕ್ಕೇರಿ ಬಾಳಪ್ಪಾ ಎಂದು ಹರುಷದಿಂದ ಹಾರೆಯಿ ಸುವೆ ಹರಸುವೆ.

ಧಾರವಾಡ
೧೫—೮—೧೯೫೮

**ಚೆ. ಎ. ಕೆವಲಿ**
ಕನ್ನಡ ಪಂಡಿತ

# ಆ ಶೀ ರ್ವಾ ದ

ಶ್ರೀಯುತ ಬಾಳಪ್ಪಾ ಹುಕ್ಕೇರಿ ಒಕ್ಕಲತನದ ಖಾತೆಯಲ್ಲಿ ಪ್ರಚಾರಕರಾಗಿ ೧೯೪೭ ರಿಂದ ಕೆಲಸ ಮಾಡುತ್ತಲಿದ್ದಾರೆ. ಒಕ್ಕಲತನ ಸುಧಾರಣೆಯ ಬಗ್ಗೆ ಇವರು ಸಂಗೀತ ಪ್ರವಚನದ ಮೂಲಕ, ಹಳ್ಳಿಯಿಂದ ಹಳ್ಳಿಗೆ ಉತ್ತರ ಕರ್ನಾಟಕದಲ್ಲಿ ಪ್ರಚಾರಮಾಡುತ್ತಲಿದ್ದಾರೆ. ಇವರು ಸಂಗ್ರಹಿಸಿದ "ವಿಕಾಸ ಗೀತೆಗಳು" ರಾಷ್ಟ್ರಾಭಿವೃದ್ಧಿ ಕಾರ್ಯಕ್ಕೆ ಹೆಚ್ಚು ಅನುಕೂಲವಾಗಿವೆ. ಈ ಪದ್ಯಗಳನ್ನು ಓದಿ ಕೇಳುವ ಪ್ರತಿಯೊಬ್ಬ ರೈತನ ಮನಸ್ಸು ವಿಕಾಸಗೊಂಡು, ಇಂದಿನ ಆಧುನಿಕ ಪದ್ಧತಿ ಪ್ರಕಾರ, ಒಡ್ಡು, ಬೀಜ, ಗೊಬ್ಬರ ಮುಂತಾದವುಗಳನ್ನು ಉಪಯೋಗಿಸುವದಕ್ಕೆ, ಪ್ರೇರಕವಾಗುವ ಈ ಚಿಕ್ಕ ಹೊತ್ತಿಗೆಯ ಉಪಯೋಗವನ್ನು ಮಾಡಿಕೊಂಡಲ್ಲಿ ಗ್ರಂಥಕರ್ತನ ಶ್ರಮಕ್ಕೆ ಪೂರ್ಣ ಫಲ ಸಿಕ್ಕಂತಾಗುವದೆಂದು ನಾನು ಭಾವಿಸುತ್ತೇನೆ.

ಧಾರವಾಡ
೨೫—೮—೫೮

**ಬಿ. ಬಿ. ಎಲಿಗಾರ** B. Ag.
ಡೆಪ್ಯೂಟಿ ಡಾಯರೆಕ್ಟರ ಆಫ್ ಅಗ್ರಿಕಲ್ಚರ
( ಧಾರವಾಡ ಡಿವ್ಹಿಜನ್ )

* * * * * *

# ಶುಭಾಶಯ

ಕನ್ನಡ ನಾಡಿಗೆ ಸುಪರಿಚಿತರಾದ ಶ್ರೀ. ಬಾಳಪ್ಪ ಹುಕ್ಕೇರಿ ಅವರು ಸಂಗ್ರಹಿಸಿದ " ವಿಕಾಸ ಗೀತೆಗಳು " ಒಕ್ಕಲತನ, ಸಮಾಜ ಶಿಕ್ಷಣ ಜನಪದ ಸಾಹಿತ್ಯ ಮುಂತಾದವುಗಳಿಗೆಲ್ಲ ಪೋಷಕವಾಗಿರುವವೆಂಬುದರಲ್ಲಿ ಸಂದೇಹ ವಿಲ್ಲ. ಸ್ವತಃ ಜನತೆಯಲ್ಲಿ ತಿರುಗಾಡಿ ಹಾಡಿ ಅವರ ಮನಸ್ಸನ್ನು ತಿಳಿದುಕೊಂಡಂಥ ಈ ಬರೆಹಗಾರರ ಕೃತಿ ಜನತೆಯ ಹೃದಯಕ್ಕೆ ನೀಟಾಗಿ ಹೋಗವದೆಂದು ನನಗೆ ಅನಿಸುತ್ತದೆ. ಅವರ ಬಾಯಿಂದ ಅವುಗಳನ್ನು ಕೇಳುವುದೆಂದರೆ ಅದೊಂದು ವಿಶೇಷ ಅನುಭವ. ನಾಡಿಗೆ ಈ ಗೀತೆಗಳ ಪೂರ್ಣ ಉಪಯೋಗ ಪರಿಣಾಮಕಾರಕವಾಗಿ ಆಗಲೆಂದು ನಾನು ಹೃತ್ಪೂರ್ವಕವಾಗಿ ಆಶಿಸುತ್ತೇನೆ.

ಧಾರವಾಡ
೨೫-೮-೧೯೫೮

**ಸಿ. ವಿ. ಜೇವೂರ,** ಬಿ.ಎ.(ಆನರ್ಸ)ಎಮ್.ಈಡಿ.
ಡೆಪ್ಯೂಟಿ ಡಾಯರೆಕ್ಟರ ಆಫ್ ಎಜ್ಯುಕೇಶನ್
ಧಾರವಾಡ ಡಿವ್ಹಿಜನ್

# ಜಾನಪದ ಸಾಹಿತ್ಯದ ಕವನಗಳು

## ಭಾರತರತ್ನ ನೆಹರು



ಚಾಲ— ನಯನೀತಿಹಾ

ನವ ಭಾರತಾ । ಘಟನಾ ವಿಧಾತಾ ॥
ನಿಜ ನೆಹರೂ । ನಾಮ ವಿಖ್ಯಾತಾ ॥ಪ॥
ನವ ನೂತನ । ರಸಬಾಳಿಗೆ ನವಜೀವವಿತ್ತ ॥
ಪಂಚಶೀಲ ತತ್ವ ॥೧॥

ಮಂತ್ರಿ ಮಾನಿತಾ । ಮಾನ್ಯ ರಾಷ್ಟ್ರ ನೇತಾ ॥
ಸಮತಾ । ಸಂಗೀತಾ । ಭಾರತದೇಶ ರತ್ನಾ ॥೨॥
ಬಗೆಕದಡಿದೆ ನಗೇ ಓಡಿದೆ । ಜಗಜೀವನಕ್ಕೆ ॥
ದಿವ್ಯ ಶಕ್ತಿದಾತಾ ॥೩॥

ಕಾಂಗ್ರೆಸ್ಸಿನ । ಜಡಭಾವನಾ । ದೂರ ಮಾಡುವಂಥಾ ।
ನ್ಯಾಯ ನೀತಿ ಮಂತಾ ॥೪॥
ಸ್ವಾತಂತ್ರದ ಚಿರಶ್ಯಾಂತಿಯಾ । ಸ್ಥಿರಗೊಳಿಸುವಂಥಾ।
ಕೀರ್ತಿ ದಿಗಂತಾ ॥೫॥

# ಜಯ ಮೃತ್ಯುಂಜಯ



ರಾಗ—ಯಮುನ ತಾಲ—ಕೆರವಾ

ಜಯ ಮೃತ್ಯುಂಜಯ । ಜಯ ಮೃತ್ಯುಂಜಯ ।
ಜಯ ಚಿನ್ಮಯ । ಕರುಣಾಕರನೇ ।
ಜಯ ನಿರ್ಭಯ । ನಿರುಪಮ ನಿಶ್ಚಿಂತನೆ ।
ಜಯ ಗುರುವರ । ಚರ ಪುಂಗವನೆ ॥ಪ॥

ಶಾಂತಿ ಸರೋವರ । ಭಕ್ತ ಮನೋಹರ ।
ಭ್ರಾಂತಿವಿದೂರಾ । ಪರಾತ್ಪರನೇ ।
ಚಿಂತಿತ ಫಲದಾಯಕನೇ । ಚಿಂತನಪರ
ವರ ಮಾನಸನೆ ॥೧॥

ಶ್ರೀ ಮದತಣಿ ಶಿವಯೋಗಿ । ಪದಾಬ್ಜ ಪರಾಗ ।
ಮುದಿತವರ । ಮಧುಕರನೇ ।
ತ್ಯಾಗ ಭೋಗಯುತ । ಯೋಗವೇ ।
ಶಿವಸಂಯೋಗ ವೆಂಬುದನು । ಬೋಧಿಪನೇ ॥೨॥

ಧಾರವಾಡದಸ್ಥಿತ । ಮುರಘಾಮಠ ।
ಕಾಸಾರ ಹಂಸ । ನೆನಿಸಿದ ಶಿವನೇ ।
ಸಾರ ಭಕ್ತಜನ । ಪಾರಿಜಾತ ।
ಭವದೂರ ನಿರಂಜನ । ಮಾನಸನೆ ॥೩॥

-ಪಂಡಿತ ವೈ. ನಾಗೇಶ ಶಾಸ್ತ್ರಿಗಳ ಕೃತ

ಮೈಸೂರ ರಾಜ್ಯದ ರಾಜ್ಯಪಾಲರಾದ,
ಶ್ರೀ ಜಯಚಾಮರಾಮರಾಜ ಒಡೆಯರ್‌ರವರು ಮುರಗೋಡದ
ಶ್ರೀ ಶ್ರೀ ದುರದುಂಡೀಶ್ವರ ಮಠಕ್ಕೆ ಆಗಮಿಸಿದಾಗ ನುಡಿದ,

## ಸ್ವಾಗತ ಪದ

ರಾಗ—ಭೀಮಪಲಾಸ ತಾಲ—ಏಕ್ತಾ



ಜಯ ಭೋ । ಜಯ ಚಾಮರಾಜ । ಯದುಕುಲ ರಾಜಾವತಂಸ ।
ಸ್ವಾಗತ ಮಿಚ್ಛಂತಿಸರ್ವೇ ॥
ಅರಭಾಂವಿ ಕ್ಷೇತ್ರಾಧೀಶ । ಗುರು ದುರದುಂಡೀಶ ಕರಜ ।
ಶಾಂತ ಮಹಾಂತ । ಶಿವಯೋಗಿ । ರಾಜದರ್ಶನೋತ್ಸುಕ ಭೋ ॥೧॥

ಗಣವರ । ಗಜಮುಖ ಸಹಿತೌ ॥ ತ್ರಿಜಗನ್ಮಾತಾಪಿತರೌ ।
ಶ್ರೀ ಪಾರ್ವತೀ । ಪರಮೇಶ । ಮಂಗಲದೌ । ಭವತಾಂತೆ ॥೨॥

ಮಹಿಶೂರ । ಪ್ರಾಂತ ಜನಸು । ಪ್ರೇಮಪಾತ್ರ । ಸಾರ್ವಭೌಮ ।
ಸುಕೃತಿನ್ । ಸತ್‌ಕೀರ್ತಿ ಸಹಿತ । ಕರ್ನಾಟಕ ಕಲ್ಪತರೊ ॥೩॥

ದುರ್ಮುಖಾಖ್ಯ । ಸಾಂವತ್ಸರ । ಆಶ್ವಿನ ಶ್ರೀ ಕೃಷ್ಣಪಕ್ಷ । ಅಷ್ಟಮಿ ।
ತಿಥಿ । ಮಂದವಾರಾಗಮನಂ । ಸುಖದಂತವ ॥೪॥

ತ್ರಿಸಿಂಗಪುರ । ನಿಜನಾಸ । ಜನಪದ ಸಾಹಿತ್ಯರತ್ನ ॥
ಸುಸಭಾಬೂಷಣ ಮಂಡಿತ । ಬಾಳಪಾಖ್ಯ ಕವಿವಿನುತ ॥೫॥

# ಮಹಾನೌಮಿ ಬನ್ನಿ

ಬಾರಯ್ಯ ಬಾಳಪ್ಪ ಮುರಗೋಡ ಪುರದವನೆ ।
ಅಕ್ಕರೆಯ ಮೊಗದವನೆ ನಕ್ಕು ಮಾತಾಡುವನೆ ॥
ಬಾರಯ್ಯ ತಂದಿಹೆನು ಮಹಾನೌಮಿ ಬನ್ನಿ ।
ಹೊನ್ನೆಂದು ಈಯುವೆನು ನನ್ನ ನಿನ್ನೀ ನನ್ನಿ ॥ ಬಾರಯ್ಯ ...

ಕಣ್ಣೀರಳಿ ಕರಳುಕ್ಕ ತುಂಬಿದಾನಂದದಲಿ ।
ತೋಳೆತ್ತಿ ತೆಕ್ಕೆಯಲ್ಲಿ ಹೃದಯದಾಲಿಂಗದಲಿ ॥
ಅಪ್ಪಿ ನಲು ನೇಹದಲಿ ನೀಡುವೆನು ಈ ಬನ್ನಿ ।
ಚಿರವಾಗಿ ಇರಲೆಂದು ನಮ್ಮ ನಿಮ್ಮೀ ನನ್ನಿ ॥ ಬಾರಯ್ಯ ....

ಧರ್ಮ ನೀತಿಯ ಮರೆತು ಬಾಳಳಿದ ಕೌರವರ ।
ಧರ್ಮವೇ ಜಯವೆಂದು ಬಾಳಿದಾ ಪಾಂಡವರ ॥
ವಿಜಯ ದಶಮಿಯ ದಿನವು ಮಹಾದಿನವು ಯಮಗೆ ।
ಸಾರುವುದು ಕೆಡಕಿಹುದ ಒಡಕಿನಲ್ಲಿ ಯೆಂದೆಮಗೆ॥ಬಾರಯ್ಯ.

ನೂರೊಂದು ಕೌರ್‍ಯಗಳು ನೆಲಸಿಹವು ದೇಹದಲಿ ।
ಪಂಚ ಶೀಲಗಳೊಡನೆ ಕಾದುವವು ನಿತ್ಯದಲಿ ॥
ಶೀಲ ಧರ್ಮವ ಬಿಡದೆ ಬಾಳಿ ಬದುಕಲಿ ಬೇಕು ।
ಪಂಚ ಶೀಲವ ಪಿಡಿದು ಕೌರ್‍ಯ ಜಯಿಸಲುಬೇಕು ॥ ಬಾರಯ್ಯ ....

ಜೀವದಿಂದಿರುವವರೆಗೆ ನೆರೆಯವರ ಜೊತೆಗೆ ।
ಸಹಕರಿಸಿ ಮನಬೆರಿಸಿ ಇದ್ದು ದಿನ ಗೆಲೆಬೇಕು ॥
ಇದುವೆ ನೌಮಿಯ ದಿನದ ದಿವ್ಯದ್ಯೋತಕವು ।
ಅದುವೆ ಜೀವನದೊಳಗೆ ಚಿರಶಾಂತಿ ನೀಡುವುದು॥ಬಾರಯ್ಯ..

ಮುಡಿದವನು
**ಲಿಂಗಣ್ಣ ದೊಡ್ಮನಿ**

# ಹುಕ್ಕೇರಿ ಬಾಳಪ್ಪ !



ಹುಕ್ಕೇರಿ ಬಾಳಪ್ಪ ಹಾಡಿದನೆಂದರೆ,
ಉಕ್ಕೇರುವದು ಕೇಳಲಿಕೆ;
ಸಕ್ಕರೆಯಾಗುವ ಗಾಯನವೆಂದರೆ,
ತಕ್ಕ ಸಮಯವು ದೊರೆವುದೇಕೆ !

ನಮ್ಮವರಂಬುವ ಅಭಿಮಾನವನು,
ಹೆಮ್ಮೆಯಿಂದಲಿ ಪಡೆದವನು,
ಬಿಮ್ಮನೆ ಗಾನ ಲಹರಿಯಲವನು,
ಚಿಮ್ಮಿಸಿ ಹೊಮ್ಮಿಸಿ ಕವನವನು !

ಕನ್ನಡನಾಡಿನ ಕಲೆಗಾರಿವನು,
ಚೆನ್ನಮ್ಮರಾಜ್ಯದ ಕಲಿಯಿವನು;
ಮುನ್ನಡೆ ಪೊಂದುತ ಕೀರ್ತಿಯನು,
ಮನ್ನಣೆಯಿಂದಲಿ ಹೊಂದುವನು !

ಶರಣ ವಚನಾಮೃತವನು,
ಸುರಿಯಿಸುತಿರುವನು ನಾಡಿನಲಿ;
ಅರಿಯಿರಿ ಇವನ ಕಲೆಯನ್ನು;
ಹರಸಲಿ ಸರಸತಿ ಜನತೆಯಲಿ !

ಒಕ್ಕಲಿಗರ ಸೇವೆಯನಿವನು,
ಮಿಕ್ಕಿ ಮಾಡುವ ಧೀರನು ಇವನು,
ಉಕ್ಕಿ ಹಾಡಿತಾ ಬೋಧಿಪನಿವನು,
ಒಕ್ಕಲಿಗರ ಕುವರನು ಇವನು !

ಯಶವನು ಪಡಯಲಿ ಬಾಳಣ್ಣ
ಜಸದಿಂ ಬರೆವನು ಬಸವಣ್ಣ;
ಅಸಮನೇತ್ರನೆ ಪೊರೆಯಣ್ಣ,
ಬಸವರಾಜನು ಕವಿಯಣ್ಣ !

" ನವೀನ ಸಾಹಿತಿ "
**ಶ್ರೀ. ಬಸವರಾಜ ಅಂಗಡಿ** ಬಂಕಾಪುರ

[ ವಿ. ಸೂ:— ದಿನಾಂಕ ೧೧—೯—೫೨ ರ ಧಾರವಾಡ ಆಕಾಶವಾಣಿಯಲ್ಲಿ ಬಾಳಪ್ಪನವರ ಸಂಗೀತ ಕೇಳಿ ಬರೆದ ಆಶುಗೀತೆಯಿದು ]

## " ನಾಡಿನ ಜನರಿಗೆ ಕರೆ "

ಚಾಲ—ನಾಡಗುಡಿಯು ಸೇರಿಸುವ

ದೇಶಸೇವೆಗೈವುದಕೆ । ಬನ್ನಿರಿ ಬುಧಜನಗಳೆ ||
ಅದುವೆ ಈಶ ಸೇವೆಯೆಂದು । ಮುನ್ನಡಿಯಿಡಿ ಈಗಳೆ ||೧||

ಹಳ್ಳಿಯಿಂದೆ । ದಿಲ್ಲಿ ಬೆಳೆದು । ದೇಶದೇಳ್ಗೆಯಾಗಲಿ
ಮಣ್ಣಿನಿಂದೆ । ಚಿನ್ನ ಬೆಳೆದು । ಚಿನ್ನದ ಹೊಗೆ ಹಾಯಲಿ ।
ಕೃಷಿಯ ನಮ್ಮ ನಾಡ ಖುಷಿಯು । ಎಂದು ಜನತೆ ಅರಿಯಲಿ
ನೇಗಿಲವೇ । ನಮ್ಮ ನಾಡ । ಕಾಮದೇನು । ವಾಗಲಿ ||೨||

ಶಾಂತಿ ಸತ್ಯ ಪಾಠ ನಮ್ಮ ನಾಡ ತಾತ ನರುಹಿದಾ||
ಆ ಉದಾತ್ತ ಮಾರ್ಗದತ್ತ । ನಮ್ಮ ನಾತ ನಡಿಸಿದಾ ||
ಹೃದಯ ವರಳಿ । ಬುದ್ಧಿ ಮರಳಿ । ಮನವಿಕಾಸವಾಗಲಿ ||
ಎಂದು ಹರಸಿ । ನಲುಮೆವೆರಸಿ । ಹೋದನೆಂತು ಪೇಳಲಿ ||೩||

ನಮ್ಮ ಜನರ । ಮನವಿಕಾಸಕಾಗಿ ನಾವು ದುಡಿಯುವಾ ।
ಈ ವಿಕಾಸ ಕೇಂದ್ರದಿಂದ । ಗುಣಪ್ರಕಾಶ ಪಡಿಸುವಾ ||೩||

# ಪ್ರಜಾರಾಜ್ಯ

ರಾಗ—ತಿಲಕ ಕಾಮೋದ 	ತಾಲ—ಏಕ್ತಾ

ನಮ್ಮ ರಾಜ್ಯ ಪ್ರಜಾರಾಜ್ಯ । ನಮಗೆ ಬೇಡ ಕಪಟ ವ್ಯಾಜ್ಯ ।
ಭರತರಾಜ್ಯ ವಿಶ್ವರಾಜ್ಯ । ಹಿಂಸೆಯಂತು ಮೊದಲೆ ತ್ಯಾಜ್ಯ ॥ಪ॥
ಗುಡಿ ಗುಡಿಸಲಿಗೆ ಸಿರಿಯು ಬಂದು । ಬಡವನ ಬಡತನವ ಕೊಂದು ।
ಒಡೆಯ ಬಡವನೆದೆಯು ಒಂದು । ನಾಡ ಅಣ್ಣ ತಮ್ಮರೊಂದು ।
ಜ್ಯಾತಿ ಮತ ಬೇರು ಆಗೆ । ಮಾತೆಯೊಬ್ಬಳೆಂದು ಬಗೆ ।
ಬೆವರು ಸುರಿಯುವಂತೆ ದುಡಿ । ಬಾಳಿಗೆಲ್ಲ ಅನ್ನ ಹಿಡಿ ॥೧॥
ನಿರಕ್ಷರಿಗೆ ವಿದ್ಯೆ ಕೊಡು । ಕುಡಕನ ಚಟ ಬಿಡಿಸಿಬಿಡು ।
ಲಂಚಗೂಳಿತನವ ಸುಡು । ಇಂದೆ ದೀಕ್ಷೆ ತೊಟ್ಟುಬಿಡು ।
ಅಡಿಯಡಿ ಯಿಡೆ । ಇದರ ನೆನವು । ವಡೆನುಡಿಯಲಿ ಇದರ ಅರಿವು ।
ಮತಿಯೊಳಗಿದು ಹೊಳಿಯಲಿ । ಕೃತಿಯೊಳಗಿದು ಬೆಳಗಲಿ ॥೨॥

# ಕನ್ನಡ ಕಡುಗಲಿ

ಭಳಿರೆ ಕನ್ನಡ ಭಲಾಢ್ಯ । ನಿನ್ನಯ ಶೌರ್ಯಕೆ ಸಮರಾರು ॥
ಖಡುಗ ಕಠಾರಿಯ ನೆತ್ತಲು । ನಿನ್ನಯ ಮುಂದೆ ನಿಲುವರಾರು ॥೧॥
ಖಡುಗದಿ ವೈರಿಯ । ಎದೆನೆತ್ತರ ನದಿ ಹರಿಸುವ ಭಟರಾರು ॥
ಗುಡುಗಲು ಕನ್ನಡ । ವೀರ ನೃಸಿಂಹನು । ಮಡಿಯದುಳಿವರಾರು ॥೨॥
ಕಿಡಿಕಿಡಿ ಕಣ್ಣುರಿ ಯುಗಳುವ ಕೋಪಂ । ಪ್ರಳಯಕಾಲ ರುದ್ರಂ ॥
ಹಿಡಿ ಹೊಡೆ ಕಡಿ ಎನ್ನುವ । ಕನ್ನಡ ಕಲಿದಕ್ಷ ವೀರಭದ್ರಂ ॥೩॥
ಉಜ್ವಲ ವೀರ ವಿಜಯನಗರದ ದೊರೆ । ದೇವರಾಯನಾರು ॥
ಬಿಜ್ಜರ ದೆದೆ ಬಿರುಸಿನ ಪುಲಿ ಕೇಳಿಗೆ । ರಣದಿ ಸಾಟಿ ಯಾರು ॥೪॥
ವೈರಿಗೆ ಮಣಿಯದ । ಕನ್ನಡ ಕಿತ್ತೂರಿನ ಪೆಣ್ಮಣಿಯಾರು ॥
ಶೂರ ಧೀರ ಕನ್ನಡ ನಾಡಿನ । ವೀರರ ಸರಿಗಟ್ಟುವರಾರು ॥೫॥
ಅಶೋಕ ಸಾಮ್ರಾಜ್ಯದ ಭಾರತವನು । ಕೊಂಡಾಡದವರಾರು ॥
ವಿಶಾಲಕರ್ನಾಟಕ ಶೌರ್ಯವನಭಿ। ವರ್ಣಿಸದವರಾರು ॥೬॥

# ೨ನೇ ಪಂಚವಾರ್ಷಿಕ ಯೋಜನೆಯ ಮುನ್ನಡೆ

ಚಾಲ—ದೇಖ ತೇರಿ ಸೌಂಸಾರಕಿ ಹಾಲತ ಎಂಬಂತೆ

ಓಡುತಿದೆ । ಮುಂದೋಡುತಿದೆ । ಜನ
ನೋಡು ನೀ ಮತಿಮಾನ್ ಮಾಡೋ ಸ್ವರಾಜ್ಯದಾಕಲ್ಯಾಣ॥ಪ॥
ನಾಡನು । ತಿದ್ದಿ । ನಾಡಿನ । ವೃದ್ಧಿ ॥
ನೋಡೋ । ನೀ । ಮತಿಮಾನ್ ॥
ಮಾಡೋ । ಭಾರತದ । ಕಲ್ಯಾಣ ॥೧॥

ಗ್ರಾಮೋದ್ಧಾರವೇ । ದೇಶೋದ್ಧಾರ ॥
ಸಹಕಾರದೊಳಿದೆ । ಅರ್ಥ ಅಪಾರ ॥
ಕೊಡುತಿದೆ । ಕೃತಿಗೂಡುತಿದೆ ॥ಜನ॥
ನೋಡೋ ನೀ ಮತಿಮಾನ್ ।
ಮಾಡೋ । ನಾಡಿನ । ನಿಜಕಲ್ಯಾಣ ॥೨॥

ಗಾಂಧಿ । ನೆಹರೂ । ಮಾಡಿದ ದಂಧೇ ॥
ದೇಶ ಸೇವೆತಾ । ಒಂದೇ ಒಂದೇ ॥
ನಿಲ್ಲದೆ । ಮಲಗದೆ । ನಡೆ ನೀ ಮುಂದೆ ॥
ನಿಂತರೆ । ಬೀಳುವೀ । ಎಲ್ಲರ ಹಿಂದೆ ॥
ದುಡಿಮೆಯೊಳಿರುವದು । ಸ್ವರ್ಗವು ಎಂದೆ॥
ದುಡಿ ದುಡಿ ನೀ । ಮತಿಮಾನ್ ॥
ಮಾಡೋ । ನವ ಯುಗವಾ । ನಿರ್ಮಾಣ ॥೩॥

ಪಾಂಚವಾರ್ಷಿಕ । ಯೋಜನೆಯಿಂದೆ
ಪ್ರಗತಿಯು ನಡೆದಿದೆ । ಭಾರತ ಇಂದೆ ||
ಪ್ರಜಾಸತ್ತೆಯ । ರಾಜ್ಯವಿದೆಂದೆ ।
ಸಮತೆಯ । ಸೂರ್ಯನು । ಮೂಡುವನಿಂದೆ ||
ಸಮಾಜವಾದವೇ । ರಾಷ್ಟ್ರಕೆ ಇಂದೆ ||
ಹೊಡಿ ಡಂಗುರ ಮತಿಮಾನ್ ||
ಮಾಡು । ದೀನ ಜನರ । ಕಲ್ಯಾಣ ||
ಮಾಡು ಭಾರತ । ನಿಜ ಕಲ್ಯಾಣ ||೪||

## ಸು ಪ್ರ ಭಾ ತ

ತಾಲ—ಝಂಪಾ ರಾಗ—ಭೂಪಾ

ಉದಯ ರವಿ । ಪಸರಿಸಿದೆ । ಉಷೆಯ ಮುಖದಲಿ ಕಾಂತಿ ||
ಉದಯನಾಗಿದೆ । ಜಗದಿ ಜನಮನದಿ ನಿಜಶಾಂತಿ ||ಪ||

ಕವಿದ ಕತ್ತಲೆ ಓಡಿ । ರವಿಕಿರಣಗಳು ಮೂಡಿ ||
ನವಿಲುಗಿರಿ । ಶಿಖರದಲಿ ನಲಿದು ಕುಣಿ ಕುಣಿದಾಡಿ ||
ಭುವಿಗೆ ಮೋದವ ನೀಡಿ । ಪಕ್ಷಿ ಸಂಕುಲ ಹಾಡಿ ||
ಬೆಳಗುತಿದೆ ಭೂಮಿಯಲಿ । ಸುಪ್ರಭಾತದ ಜ್ಯೋತಿ ||೧||

ಜ್ಞಾನನಿಧೀ ಏಳೈಯ್ । ದೀನ ಜನ ಪೋಷಣೆಗೆ ||
ಕ್ಷೋಣಿಯೊಳು । ಕ್ಷಯವಾದ । ರಾಷ್ಟ್ರ ಸಂಸ್ಥಾಪನೆಗೆ ||
ಮರ್ತ್ಯ ಲೋಕವ ನೋಡು । ಅವತರಿಸು । ಶಿವಶಾಂತಿ ||೨|

# ಒಂದಾದ ಕರ್ನಾಟಕ ರಾಜ್ಯ

ರಾಗ—ಶಿಹರಾ ತಾಲ—ಎಕ್ಕಾ

ಕನ್ನಡ ಒಡಮೂಡಿತು ||
ಕನ್ನಡ ಒಡಗೂಡಿತು ||
ಕನ್ನಡಾಂಬೆ ತನ್ನದಾದ ನಾಡ ಒಡತಿಯಾದಳು ||
ಕನ್ನಡ "ಮೈಸೂರ ರಾಜ್ಯ" ವೆಂಬ ಹೆಸರು ಪಡೆದಳು ||
ಕನ್ನಡ ಪ್ರೀತಿಯ ಕನ್ನಡಿ
ಕನ್ನಡ ನೀತಿಯ ಮುನ್ನುಡಿ ||
ಕನ್ನಡ ಕವಿಗಳ ಹೊನ್ನುಡಿ ||
ಕನ್ನಡ ನುಡಿ ಬಳ್ಳಿಯ ಕುಡಿ ||
ಹಬ್ಬಿ ಹೂವ ಬಿಟ್ಟಿತು
ಫಲವ ನಮಗೆ ಕೊಟ್ಟಿತು ||೧||

ಹಳಗನ್ನಡ ಪಂಪ ರನ್ನ ||
ನೆಲಗನ್ನಡವಾಯಿತು ||
ಸಲೆ ಮುದ್ದಣ ಕಬ್ಬಕಿಂದು ||
ಕನ್ನಡ ಕಂಪೇರಿತು ||
ನಿಜಗುಣ ಸರ್ಪ್ವಣ ರುಲಿದಾ ||
ಕನ್ನಡ ಕಳೇ ಗಟ್ಟಿತು ||೨||

ಬಸವ ಸಿದ್ಧರಾಮ ಸಾಹಿತ್ಯಕಿಂಬುಗೊಟ್ಟಿತು ||
ಸಿಡಿದ ನಾಡು ಒಂದುಗೂಡಿ ಕನ್ನಡ ಗುಡಿ ಕಟ್ಟಿತು ||
ಒಡೆದ ನಾಡು ಅಂಗಲಿಂಗ ||
ಸಮರಸದಲಿ ಬೆರೆಯಿತು ||೩||

# ಸಂಯುಕ್ತ ಕರ್ನಾಟಕ

ರಾಗ—ಮಾಲಿಕಾ

ಬನಸಿರಿ ನೋಡು ಬಣ್ಣಿಸಿ ಹಾಡು | ಚನ್ನ ಕನ್ನಡ ನಾಡು | ನಂದನ
ಸುಂದರ ಸುರನಾಡು ||
ಸುಮ ಶ್ರಿಂಗಾರದ ಗಿಡಬಳ್ಳಿ | ಕೆಂದಳಿರಿನ ಕೆಂಪನು ಚೆಲ್ಲಿ ||
ಕುಣಿಯುವ ದಿಲ್ಲಿ | ತಣಿ ಮನದಲ್ಲಿ| ಚಂದ ಚಲುವ ನಾಡು ||
ನಾಡಿನ ನೈಜ ಕವನ ಹಾಡು ||೧||

ಗಿರಿ ನದಿಗಳ ಬಂಧೂರ ಕಾಡು | ಋಷಿ ಮುನಿಗಳ ತಪಸ್ಶಿನ ಗೂಡು ||
ಸಗ್ಗದ ಬೀಡು | ಸಿರಿ ಕರುನಾಡು | ಕಣ್ಣು ತುಂಬಿ ನೋಡು |
ಚಿನ್ನದ ಮಣ್ಣಿನ ನೆಲೆವೀಡು ||೨||

ಕೃಷಿರಾಜರ ರೈತರ ನಾಡು | ನೆಲಬಸಿರ ಹಸಿರ ಮುದ್ದಾಡು ||
ಹೊಸಬಿಸಿ ಬಂದ | ಸಸಿಗಳ ಚಂದ | ಮಂದಹಾಸ ನೋಡು ||
ಪ್ರೀತಿಯ ನಾಡಹಬ್ಬ ಮಾಡು ||೩||

ಕವಿ ಬಣ್ಣದ ಮಣ್ಣಿನ ನಾಡು | ಬಸವಣ್ಣ ಬೆಳೆದ ಕರುನಾಡು ||
ಕೆತ್ತಿದ ಸಿಲೆಯಾ ಶಿಲ್ಪದ ನಿಲಯಾ | ಕಲೆಯ ಬಲೆಯ ನಾಡು ||
ಚಿತ್ರದ ಗುಡಿಗೋಪುರ ನೋಡು ||೪||

ಗೋರಕ್ಷಣ ಧರ್ಮದ ನಾಡು | ಸಂರಕ್ಷಣ ದೀನರ ನಾಡು ||
ಅಕ್ಷಯ ನಾಡು ರಕ್ಷಣೆ ಮಾಡು | ದಕ್ಷತೆಯೊಡಗೂಡು ||
ಲೋಕದ ಸೇವೆಗೆ ತನುನೀಡು ||೫||

ಕೃಷಿಕನ್ನಡ ರೈತರ ನಾಡು | ಬಿಸಿ ರಕ್ತದ ವೀರರ ನಾಡು ||
ರಸಋಷಿ ನಾಡು ಐಸಿರಿ ಕೋಡು | ಹಸುರಿನ ಮಲೆನಾಡು
ಭಾಗ್ಯದಿ ಎಸೆವ ಬೈಲನಾಡು ||೬||

ಬೆಲೆಬಾಳುವ ಲಕ್ಷ್ಮಿಯ ಹತ್ತಿ । ಹೊಲದಲ್ಲಿ ರೈತನೀ ಬಿತ್ತಿ ॥
ದುಡಿತದ ಬುತ್ತಿ ದುಡ್ಡಿನ ತಿತ್ತಿ । ತುಂಬಿ ತುಂಬಿ ಒತ್ತಿ ॥
ರಾಷ್ಟ್ರದ ಬಡತನವನು ದೂಡು ॥೭॥

ಜೀವನ ಸಗ್ಗದ ಸವಿನಾಡು । ಕವಿ ಎದೆ ಹೆಜ್ಜೇನಿನ ಗೂಡು ॥
ಹರುಷದ ನಾಡು । ಪರುಷದ ನಾಡು । ಆರತಿಯನು ಮಾಡು ॥
ನಾಡಿನ ಕೀರುತಿಯನು ಪಾಡು ॥೮॥

ಜಿನಬಸ್ತಿ ಬದಾಮಿಯ ನೋಟಾ । ಭವ್ಯಾಕೃತಿ ಬಂಧೂರ ಮಾಟಾ ॥
ಹೂವಿನ ತೋಟಾ । ತುಂಬಿಗೆ ಊಟಾ । ನಮ್ಮ ರಾಜ್ಯಪೀಠಾ ॥
ಕನ್ನಡ ಭಾಗ್ಯದ ಬೈಲಾಟಾ ॥೯॥

ತೊರೆ ತುಂಗಭದ್ರೆ ಕಾವೇರಿ । ಮಲಹಾರಿ ಕೃಷ್ಣ ಜಲನಾರಿ ॥
ಹರಿಯುವ ದಾರಿ । ಬಹು ಫಲಕಾರಿ । ಸೌಭಾಗ್ಯದ ಸೂರಿ ॥
ನೋಡದೋ ನಾಡಿನ ಶುಭಕಾರಿ ॥೧೦॥

ಸಂಗೀತ ಕಲೆಯ ತವರೂರು । ಶೃಂಗಾರ ಶಿಖರ ಮೈಸೂರು ॥
ವಾಣಿಯ ಊರು । ವೀಣೆಯ ಊರು । ಕಾವ್ಯಗಾನದೂರು ॥
ಕನ್ನಡ ರಾಜ್ಯಭವನದೂರು ॥೧೧॥

ನೋಡಲ್ಲಿ ಜೋಗ ಜಲಪಾತಾ । ಮುಗಿಲೊಗೆದ ನೀರ ಸಂಪಾತಾ ।
ಜಲನಿರ್ಗಾತಾ । ಶಿಲೆಯನಿಪಾತಾ । ಕಾವ್ಯ ಕವನ ಚೇತಾ ॥
ಹಾಡುವೆ ನಿಲ್ಲಿ ನವ್ಯಗೀತಾ ॥೧೨॥

ನಡೆ ನೋಡು ವಿಜಾಪುರದಲ್ಲಿ । ಮುಗಿಲೊತ್ತಿದ ಬೋಳ್ ಗು–
ಮುಟದಲಿ । ವೈಭವ ಬಳ್ಳಿ ಕುಡಿವರೆದಲ್ಲಿ । ಮೆರೆದ ನಾಡ ಸಿರಿಯಾ ।
ನೋಡುತೆ ಮಾಡು ಮಿಾಸಿ ಹುರಿಯಾ ॥೧೩॥

ಬೆಳೆ ಗೋದಿ ಜೋಳ ಧಾನ್ಯಗಳಾ । ಗೃಹಲಕ್ಷ್ಮಿ ಲಕ್ಷ್ಮಿ ಕಾಳುಗಳಾ ||
ನವಧಾನ್ಯಗಳಾ । ಬಿತ್ತಿ ಹೊಲಗಳಾ । ನಾಡಶೋಭೆ ನೋಡು ||
ನಾಡಿಗೆ ಅನ್ನದಾನ ಮಾಡು ||೧೪||

ಒಡೆದಂತಹ ಕನ್ನಡ ನಾಡು ಒಡಗೂಡಿದ ಸಗ್ಗದ ಬೀಡು
ಅಂದದ ನಾಡು । ಚಂದದ ನಾಡು । ಹೊಸಗನ್ನಡ ನಾಡು ||
ನಾಡಿನ ಬಯಕೆಗೆ ಕೈಗೂಡು ||೧೫||

ಸೋಮೇಶ್ವರ ಸೊಗಲದ ಕ್ಷೇತ್ರಾ। ಮುರಗೋಡ ನಾಡಗಡಿ ನೇತ್ರಾ||
ದರ್ಶನಪಾತ್ರಾ । ಜನ್ಮಪವಿತ್ರಾ । ಮುಕ್ತಿ ಮಾರ್ಗ ಸೂತ್ರಾ ।
ನಿತ್ಯದೀ ಮಾಡು ಶಿವನ ಸ್ತೋತ್ರಾ ||೧೬||

## " ಆಕಳು "

ರಾಗ—ಭೀಮಪಲಾಸ ತಾಲ—ತ್ರಿತಾಲ

ಆಕಳು । ಆಕಳು । ರೈತನ ಮನೆಯ । ಭಾಗ್ಯದ ಬಾಳು
ಹಾಲಿನ ಕಡಲು । ತುಪ್ಪದ ಹೊನಲು ||
ಬಾಳಿನ ಶಿರಿಸಂಪತ್ತಿಗೆ । ಮೊದಲು ||೧||

ಬಸವನ ಕುಲವು । ರಾಷ್ಟ್ರದ ನಿಲವು ||
ನೇಗಿಲಯೋಗಿಯ । ತಾಯಿಯ ಕರಳು ||೨||

ಗೋಪಾಲನವು । ಭೂಪಾಲನವು ||
ಹೊನ್ನು ರನ್ನುಗಳ ತುಂಬಿದ ಕೊಡವು ||೩||

ಗೋವಿನ ಬಲವು । ರೈತನ ನಿಲವು ||
ಕೃಷಿವಲರಿಗೆ ತಾ ನಿತ್ಯದ ಫಲವು ||೪||



# ಗೋವಿಂದನಾದಿ ಗೋವಿಂದ

(ಮೈಲಾರ ಬಸಲಿಂಗ ಶರಣರ ಕೃತಿ)

ಗೋವಿಂದನಾದಿ ಗೋವಿಂದ । ನಮ್ಮ
ಗೋವಿಂದಲಾದ ಪಾವನ ಪಾಂಡುರಂಗ ॥ಪ॥

ಶ್ರೀ ವಿಭೂತಿಯು ಪಂಚ ಗೋವಿಂದ । ವೀರ
ಶೈವಾಗಮೋಕ್ತವು ಗೋವಿಂದ
ಪೀವ ಪಂಚಾಮೃತ ಗೋವಿಂದ । ಜಗ–
ಜ್ಜೀವ ಸಂತೃಪ್ತಿಯು ಗೋವಿಂದ ॥೧॥

ಹವ್ಯ ಕವ್ಯಗಳೆಲ್ಲ ಗೋವಿಂದ । ಷಡು–
ಗವ್ಯ ಸಮ್ಮಾರ್ಜನೆ ಗೋವಿಂದ
ದ್ರವ್ಯ ಸಂಗಳಿಕೆಯು ಗೋವಿಂದ । ಮಹ
ದಿವ್ಯ ಪ್ರಕಾಶವು ಗೋವಿಂದ ॥೨॥

ಗೋತ್ರ ಹೋತ್ರವು ನಮ್ಮ ಗೋವಿಂದ । ಪುಣ್ಯ
ಕ್ಷೇತ್ರ ಯಾತ್ರೆಗಳೆಲ್ಲ ಗೋವಿಂದ
ಧಾತ್ರಿ ಪಾವನಗಾತ್ರಿ ಗೋವಿಂದ । ಸುಪ–
ವಿತ್ರ ಚಾರಿತ್ರವು ಗೋವಿಂದ ॥೩॥

ಅಭವ ವಾಹನವು ತಾ ಗೋವಿಂದ । ಬಹು
ಶುಭಮಂಗಲೆಯ ಜಾತ ಗೋವಿಂದ
ವಿಬುಧಗಮನಶ್ವೇತ ಗೋವಿಂದ । ಕೃಷ್ಣ
ನುಭಯಾಂಬಕವು ತಾ ಗೋವಿಂದ ॥೪॥

ಮೂರುತಾಪ ವಿನಾಶ ಗೋವಿಂದ । ಸುವಿ–
ಚಾರ ಮೋಕ್ಷವಿಲಾಸ ಗೋವಿಂದ
ಸಾರಸುಖ ವಿಶೇಷ ಗೋವಿಂದ । ಚೆನ್ನ–
ವೀರ ಸದ್ಗುರುವಾಸ ಗೋವಿಂದ ॥೫॥

# ಹಿಂದುಸ್ತಾನಕೆ ಎಂಥವ ಬೇಕ

ರಾಗ—ಭೈರವಿ ತಾಲ—ಕವಾಲಿ

ಹಿಂದುಸ್ತಾನಕೆ ಎಂಥವ ಬೇಕ ।
ಬಿ. ಎಜಿ. ಪಾಸಾಗಿರಬೇಕ ||ಪ||

ಮೋಟರ ಕಾರೊಂದ । ಎನಗಿರಬೇಕ ||
ಹೆಂಡತಿ ಬಲಗಡೆ । ಕುಂತಿರಬೇಕ ||
ಕಾರನು ಕಾಂತೆಯು । ನಡಿಸಲು ಬೇಕ ||
ಕನ್ನಡ ಬಾವುಟ । ಮುಂದಿರಬೇಕ ||೧||

ಹರುಷದಿ ಕನ್ನಡ | ಹಾಡಲಿ ಬೇಕ ||
ಹಾಡುವ ಮೋಟಾರ । ಓಡಲಿ ಬೇಕ ||
ಮಮತೆಯ ತೋಟಕ | ಮುಟ್ಟಿರಬೇಕ ||
ತೋಟದಿ ಮೂಡಲ । ಎತ್ತಿರಬೇಕ ||೨||

ಕೃಷ್ಣಾ ತೀರದ | ಆಕಳಿರಬೇಕ ||
ಬೆಳಗಾಂವ ನಾಡಿನ | ಎಮ್ಮಿರಬೇಕ ||
ಹಣ ಚಿಕ್ಕ ಹುವ ಬಾಲ । ಕ್ವಾಣಿರಬೇಕ ||
ಅಯಿಕ್ಕ ರೊಯಿಕ್ಕ । ಅಂತಿರಬೇಕ ||೩||

ಹೊಳಿ ದಂಡಿ ನ್ಯಾಲ । ಹೊಲವಿರಬೇಕ ||
ಎಂಟರ ರೆಂಟಿ । ಹೂಡಿರಬೇಕ ||
ಬಂಟ ಹುಡುಗನಾ । ಹೊಡಿತಿರಬೇಕ ||
ಕರಕಿ ನಟ್ಟ । ಕೀಳತಿರಬೇಕ ||೪||

ಕೆನಿ ಕೆನಿ ಮಸರಾ | ರೊಟ್ಟಿ ಬೇಕ ||
ನುಚ್ಚು ಮಜ್ಜಿಗಿ | ಹೊಡಿಯಲಿ ಬೇಕ ||
ಮೀಶಿಮ್ಯಾಲ ಕೈನಾ | ಹಾಕಲಿ ಬೇಕು ||
ಹೆಂಡತಿ ಕುಲು ಕುಲು | ನಗತಿರಬೇಕ ||೫||

ಹಳ್ಳಿ ಆಳನಾ | ಹುರುಪಿರಬೇಕ ||
ಹುಡುಗರು | ಕುಣಿ ಕುಣಿದಾಡಲುಬೇಕ ||
ಹುರುಪನು ತುಂಬುವ | ಪದವಿರಬೇಕು ||
ಹುಕ್ಕೇರಿ ಬಾಳೂ | ಹಾಡಿರಬೇಕ ||

H. M. V. ರಿಕಾರ್ಡಿನಲ್ಲಿ ಅಂದವರು—

**ಶ್ರೀ ಬಾಳಪ್ಪ ಹುಕ್ಕೇರಿ,** ಒಕ್ಕಲುತನ ಖಾತೆಯ (ಪ್ರಚಾರಕರು)

## ಖಾದಿ

ಖಾದೀ ಧರಸೋಣು | ಬಾರಣ್ಣಾ ನಾವೆಲ್ಲರೂ ಕೂಡಿ ||
ಖಾದೀ ಧರಸೋಣು | ಬಾರಣ್ಣಾ ||ಪ||

ಖಾದೀಯ ಹಾಕಲು | ಸೊಗಸು ||
ಬೀದಿಲಿ | ನೋಡಲು ಮನಸು ||
ಕೌದಿಗೆ | ಹಚ್ಚಲು ನಿರಸು ||೧||

ಬಡವರ ಜೀವನ | ಸಾಗುವ ಖಾದಿ ||
ಉಡುವರ ಪ್ರೀತಿಗೆ | ಪಾತ್ರವು ಖಾದಿ ||
ಸಡಗರ ಬಾಳಿನ | ಸ್ನೇಹವು ಖಾದಿ ||೨||

ನಮ್ಮಯ ದೇಶದ | ನೂಲಿನ ಖಾದೀ ||
ಸುಮ್ಮನೇ | ಕುಳಿವರ ಕೆಲಸದ ಖಾದೀ ||
ಹೆಮ್ಮೆಯ ವಿಷಯದು | ನಮಗದು ಖಾದಿ ||೩||

ಹಿಂದುಸ್ತಾನದಿ ಜನಿಸಿದ ಖಾದಿ ||
ಗಾಂಧೀ ಮಹಾತ್ಮನು | ಧರಿಸಿದ ಖಾದಿ ||
ಮಂದಿರದೋಳ್ | ಮಡಿ ಎನಿಸಿದ ಖಾದೀ ||೪||

# ಧನ್ಯ ಘಟಪ್ರಭೆ !

## ಭಾವಗೀತ

ಧನ್ಯ ಘಟಪ್ರಭೆ ದೀನೋದ್ಧಾರಿಣಿ
ಮಾನ್ಯಳು ನೀ ಕರುನಾಡಿನ ಜನನಿ !

'ಧುಮ್ ದುಮ್ಮೆಂದು' ದಡುಕುತ ದುಡುಕುತ
ನಮ್ಮಯ ನಾಡನು ಹುಡುಕುತ ಹುಡುಕುತ
ರಾಮಘಾಟದಿಂದೋಡುತ ಬಂದೆ
ರಾಮರಾಜ್ಯದೈಸಿರಿಯನು ತಂದೆ ||೧||

ಹರಡಿತು ನಿನ್ನಯ ಪ್ರಭಾವ ದಿಲ್ಲಿಗೆ
ತ್ವರಿತದಿ ಅರ್ಥ ಸಚೀವರು ಇಲ್ಲಿಗೆ
ಸರಸ–ಮನೋಹರ ಸ್ವಾಗತ ಅವರಿಗೆ
ಬಿರಿದವು ನಮ್ಮಯ ಎದೆ–ಹೂ–ಮಲ್ಲಿಗೆ ||೨||

ಒಡಲೊಳು ಸ್ಫಟಿಕದ ವಾರಿಧಿ ಮೆರೆಯಿತು
ಬೆಡಗಿನ ಪ್ರಾರಂಭೋತ್ಸವ ಜರಗಿತು
ಎಡದಂಡೆ ಕಾಲುವೆ ಬಾಗಿಲು ತೆರೆಯಿತು
ಒಡನೆಯೆ ನಾಡಿಗೆ ಕಾಣಿಕೆ ದೊರೆಯಿತು ||೩||

ನೂರು ಸಾವಿರೆಕರೆ ಭೂ–ಪೃಷ್ಠ ತಣಿಯಲಿ !
ನೆರೆ ತರುಕುಲ ಫಲ–ಭಾರದಿ ಮಣಿಯಲಿ !
ಕರುನಾಡಿನ ಜನ–ಜೀವನ ಕುಣಿಯಲಿ !
ಸಿರಿಯುರಸಿಯು ಕುಣಿಕುಣಿದು ದಣಿಯಲಿ ! ||೪||

ಪ್ರಕೃತಿಯು ನಿನ್ನಯ ಜಲದಲಿ ಮಿಂದು
ವಿಕೃತರೂಪಿನ ಬರಗಾಲನ ಕೊಂದು
ಹಿರಿಯರ ಕನಸಿಂದು ಈಡೇರುತಿದೆ
ಸಿರಿ–ಸಂಪತ್ತಿನ ಬೀಡಾಗುತಿದೆ. ||೫||

ಇಗೋ ತಾಯೆ ! ನನ್ನ ಪ್ರಥಮ ನಿವೇದನ
ತ್ಯಾಗಿ ಜೀವನಕಿದುವೆ ಸಮರ್ಪಣ !
ಬಾಗಿ ಬೇಡುವೆ ನಿನ್ನ ವರ ಪ್ರಸಾದನ
ಆಗಲಿ ನನ್ನದು ಸಫಲ ಜೀವನ

ನಾಳಿನ ಭವಿಷ್ಯದ ಬಾನಿನಲಿ ನೀ
ಬಾಳಿನ ಬಾವುಟ ಹಾರಿಸು ಜನನಿ !
ಧನ್ಯ ಘಟಪ್ರಭೆ ದೀನೋದ್ಧಾರಿಣಿ
ಮಾನ್ಯಳು ನೀ ಕರುನಾಡಿನ ಜನನಿ !

## " ಸದಾಸುಖಿ ದುಡಿವಾತಾ "

ಚಾಲ—ಪಿಯಾ ಮಿಲನಕೋ ಜಾನಾ

ಸದಾ ಸುಖಿಯು । ದುಡಿವಾತಾ ॥ ಬಡ ರೈತಾ ॥
ಸತತ ದುಡತಾ । ಮನದ ಜಡತಾ ॥
ಹೋಗಲಾಡಿಪುದಮಿತಾ ॥ಪ॥

ಕೋಟಿಸು ವಿದ್ಯೇಯೊಳು । ಮೋಟಿಯ ವಿದ್ಯೆ ಮೇಲು ॥
ಸುಖಸಾಧನಾ ನೇಗಿಲು । ಎಲ್ಲರೊಳು ಮಿಗಿಲು ॥
ಭಾಗ್ಯದ ಯೋಗಕೆ । ಸೌಖ್ಯದ ಭೋಗಕೆ ॥
ಭರೊ ಧರಾ ಮಾಡು ತ್ವರಾ । ಭೂಮಾತೆ ಸೇವಾ ॥೧॥

ದೂಡೋ ದೂಡೋ । ಅಜ್ಞಾನ ಭೂತ ॥
ಬಿಡೊ ಬಿಡೋ । ಬಂಧೂ ಘಾತ ॥
ಹಿಂದ ಮಾತೆಯ । ಸೇವೆ ಮಾಳ್ಪ ॥
ಜನಕೆ ಸುಖವಿಧಾನಾ ॥೨॥

# ವನಮಹೋತ್ಸವ

### ಭಾವಗೀತ

ವನಮಹೋತ್ಸವ | ಮಾಡಬರ್‍ರೇಣ್ಣಾ ತ್ವರಿತದಲಿ
ಅಣ್ಣಾ ಗಿಡಗಳನ್ನು ಬಿಡದೆ ನಡರೆಣ್ಣಾ ||ಪ||

ತಡೆದು ತೀಡುವ ಗಾಳಿ ಬಿಡದೆ ಬೀಳುವ ಮಳೆಯು
ಕೊಡುತಿಹುದಾವುದು ಕಡು ತಂಪನಿಳೆಗೆ
ಗಿಡಗಳಿಂದಲಿ ಭೂ ದೇವಿಯಾ ಮುಖಕಳೆಯು
ಕಡು ಬಿಸಿಲ ತಾಪವನು ಕಳೆವುದೀ ಗಿಡವು ||೧||

ಗಿರಿಗಳಲಿ ಹಿಮಗಿರಿಯು ಹಿರಿಯು ತಾನೆನಿಸಲು
ತರುಗಳೇ ಕಾರಣವು ತಿಳಿದಿದನು ನೋಡು
ಅರಿದರಿದು ನೋಡಿದರೆ ಸದಾ ಸಿರಿಗೆಲ್ಲ
ಹಿರಿದಾದ ಕಾರಣವದೇ ಕಲ್ಪ ತರುವು ||೨||

ಬಡವನಾ ಗುಡಿಸಲು ಪೊಡವಿಯೊಡೆಯನ ರಥವು
ಜಡ ಧಾತುಗಳನ್ನೆಲ್ಲ ಸುಡುವ ಇದ್ದಲಿಯು
ನಾಡಹಬ್ಬದಿ ನಾವು ಕೊಡುಕೊಳ್ಳ ಬನ್ನಿಯು
ನಾಡ ಗುಡಿ ಕಂಬಗಳು ಗಿಡಗಳಿಂದಲ್ಲವೆ? ||೩||

ಕಿರಿತನದಿ ಕರದೊಳು ಇರುತಿಹ ಗಿಲಗಂಚಿ
ಚರೆಸುತ್ತಿ ಆಡಿಸಿದ ಬಣ್ಣದಾ ಬೊಗರಿ
ಸ್ಮರಣೆಯಿಂದೆಣಿಸುವ ಜಪಮಾಲೆ ಮಣಿಗಳು
ಹಿರಿಯರಾ ಕರದೊಳಿಹ ಬಡಿಗೆ ತರುವಿನವು ||೪||

ಇರಲು ಕಟ್ಟಿದ ಮನೆಯು ತರತರದ ವಾಹನಗಳು
ಸರಭರನೆ ಕೆನೆ ಮೊಸರು ಕಡೆವ ಕಡೆಗೋಲು
ಗುರಗುರನೆ ಬೀಸುವ ಕಲ್ಲಿನಾ ಗೂಟಗಳು
ತರುವಿನವು ಹೊಳೆದಾಟುತಿರುವ ಹರಗೋಲು ||೫||

ಹಾಡುವಾ ಜನಗಳಾ ತಂಬೂರಿ ಕಾಯಿಯು
ಕಾಡುವಾ ದನಕಿರುವ ಕೊರಳಗುದ್ದಿಗಳು
ಮೋಡಿಕಾರನ ಬಳಿಯ ಕಾಡಿನಾಬೇರುಗಳು
ನಾಡಿನಾ ವನಸಿರಿಯು ಗಿರಿಗಳಿಂದಲ್ಲವೆ ? ||೬||

ದನಕರುಗಳಾಹಾರ ಜನಗಳಾ ಅನ್ನವು
ದನಗಳನು ಕಟ್ಟುವ ನಾರಿನಾ ಕಣ್ಣಿಗಳು
ಮನವನ್ನು ಸೆಳೆಯುವ ನೂಲಿನಾ ಬಟ್ಟೆಗಳು
ಘನರೋಗದೌಷಧಗಳೆಲ್ಲ ತರುವಿನವು ||೭||

ಕಳ್ಳತನ ತಡೆಯುವ ಮುಳ್ಳಿನಾ ಬೇಲಿಗಳು
ಒಳ್ಳೊಳ್ಳೆ ದೇವರಿಗೆ ಒಡೆವ ತೆಂಗುಗಳು
ಒಳ್ಳೆಣ್ಣೆ ಗಂಧೆಣ್ಣೆ ಹಲವಾರು ಎಣ್ಣೆಗಳು
ಹಳ್ಳಿಗಳ ಸಿರಿ ಸೊಬಗು ಗಿಡಗಳಿಂದಲ್ಲವೆ ? ||೮||

ಹೊಡೆದಾಟಕೆಲ್ಲಕೆ ಬಡಿಗೆಯೇ ಸಾಧನವು
ಕಡೆಗೊಮ್ಮೆ ನಿರ್ಣಯ ಕೊಡುವ ಟಾಕಿನ ಗಣೆಯು
ಹಡೆದಾಗ ಹಾಕುವ ಹರವಾದ ಬುಟ್ಟಿಯು
ಸುಡುಗಾಡ ವಾಹನವೂ ಗಿಡಗಳಿಂದಲ್ಲವೆ? ||೯||

ಹಸನಾಗಿ ಕಸ ತೆಗೆವ ಕಸಬರಿಗೆ ಏತರದು ?
ವಾಸನೆಯ ಸೂಸುವ ಕುಸುಮಗಳೆಲ್ಲಿಹವು ?
ಕೃಷಿ ಕಾರ್ಯ ಸಾಗಿಸುವ ಕಟ್ಟಿಗೆಯು ಏತರದು ?
ರಸಭರಿತ ಹಣ್ಣುಗಳು ಗಿಡಗಳಿಂದಲ್ಲವೆ ? ||೧೦||

ಮೊಸಲಾಗಿದೆ ಗಿಡವು ದೇಶದಾಜನಕೆಲ್ಲ
ಬೇಸಾಯಕೆಲ್ಲಕೆ ಬೇಕಾದ ಗಿಡವು
ಹಸಿರು ಸೀರೆಯನು ವಸುದೇವಿಗುಡಿಸಲು
ಹೊಸದಾಗಿ ಗಿಡಗಳನು ನೆಡಿರಯ್ಯಾ ನೀವು ||೧೧||

## ' ಅನ್ನದಾತ '

ರಾಗ—ಭೈರವಿ ತಾಲ—ದಾದರಾ

ಲೋಕನಾಥಾ ಅನ್ನದಾತಾ | ಬೇಕು ಶಾಂತಿ ನೀಡು ರೈತಾ ||
ಭರದಿ ನೀವು । ಕಾಳ ಬೆಳಿರಿ । ಭಾರತೀಯರಿಗೆ | ಬಲವ ತರ್ರಿ ||
ಧಾನ್ಯದಿಂದ ದೇಹಬಲವು | ಧಾನ್ಯದಿಂದ ದೇಶಬಲವು ||
ಧಾನ್ಯದಿಂದ ಜೀವನವು | ಧಾನ್ಯದಿಂದ ಧನದ ಬಲವು ||
ಉತ್ತಮ ತರ ಹತ್ತಿ ಬಿತ್ತಿ | ಸಂಪತ್ತಿನ ಶಿಖರ ಹತ್ತಿ ||
ಗೋದಿ ಸಜ್ಜಿ ಬತ್ತಾ ಬಿತ್ತಿ | ಭಾರತಕೆ ಬಲವು ತರಿಸಿ ||
ಕರುನಾಡಿನ ರೈತರಿಗೆ | ದೊರಿಯಲಿ ಸುಖ ಬೇಡಿಕೊಂಬೆ ||
ಶಕ್ತಿ ಯುಕ್ತಿ । ಬ್ರಹ್ಮಚರ್ಯ । ಭಕ್ತಿ ಮಾರ್ಗ ಕುಂದದಿರಲಿ ||

# ತೆಂಗಿನಾಗಿಡ ನಾನು

**ಭಾವಗೀತ**

ತೆಂಗಿನಾಗಿಡ ನಾನು ಹಿಂಗಿಸುವೆ ಬಡತನವ
ಅಂಗಳದಿ ನಾನಿರಲು ಶೃಂಗಾರ ಮನೆಗೆಲ್ಲ ||ಪ||

ಬೇರೆ ಗಿಡಗಳಿಗಿಂತ ಮೀರಿ ಬೆಳೆದಿಹೆ ನಾನು
ದಾರಿಯಾ ಬದಿಯೊಳಗೆ ಧೀರನೊಲು ನಿಂತಿರುವೆ
ನೂರಾರು ಕೆಲಸದೊಳು ಊರಜನಕಾಗುವೆನು
ಸಾರಿ ಹೇಳುವೆ ನನ್ನ ತೀರಲಾರದ ಕಥೆಯ ||೧||

ಒಪ್ಪುತಿಹ ಕಸಬರಿಗೆ ಮುಪ್ಪಾಗದಿಹ ಚಾಪೆ
ತಪ್ಪಿಸಲು ಮಳೆ ಬಿಸಿಲ ಚಪ್ಪರದ ಹೊದಿಕೆಗಳು
ಕಪ್ಪಲಿಯ ಹೊಡೆಯುತಿಹ ದಪ್ಪಾದ ಹಗ್ಗಗಳು
ದಪ್ಪ ದಿಂಬುಗಳೆಲ್ಲ ಸಿಪ್ಪೆಯಿಂದಲೆ ನೋಡು ||೨||

ಸಿಪ್ಪೆಯಿಂ ತಿಕ್ಕಿದೊಡೆ ಒಪ್ಪುವವು ಪಾತ್ರೆಗಳು
ಚಿಪ್ಪಿನಿಂದಲೆ ನಿಮ್ಮ ಕುಪ್ಪಸದ ಬಿರಡೆಗಳು
ತಪ್ಪಿ ಸುಟ್ಟೊಡೆ ಬರುವ ಕಪ್ಪಾದ ಕರಿಬೊಟ್ಟು
ತಪ್ಪದಲೆ ತಿಕ್ಕಲ್ಕೆ ಒಪ್ಪುವವು ಹಲ್ಲುಗಳು ||೩||

ಎಳೆ ತೆಂಗಿನೊಳ ನೀರ ಇಳೆಯೊಳಗಿನಮೃತವು
ಬಳಲಿ ಬಿಸಿಲೊಳು ಕುಡಿಯೆ ಅಳಿವುದೆಲ್ಲಾ ದಣಿವು
ಹೋಳಿಕೆಯೊಳು ಹೊಂದಿರುವ ಬಿಳುಪಾದ ಕೊಬ್ಬರಿಯ
ಬಳಿಕೆಯಾದರೆ ಅಡಿಗೆ ಕಳೆಗೊಂಡು ರುಚಿಸುವದು ||೪||

ಜೀವನಕೆ ಬಡವರಾ ಕೊಲೆ ಕಂಬ ಜಂತೆಗಳು
ದೇವನೊಲುಮೆಗೆ ಒಡೆವ ತೆಂಗಿನಕಾಯಿಗಳು
ತಾವೆಲ್ಲ ತಲೆಗಿಂದು ಪೂಸುವಾ ಎಣ್ಣೆಗಳು
ಯಾವ ಬಡಬಲ್ಲಿದಗು ಬೇಕೆನ್ನ ಬಾಳು ||೫||

ಬಡವನಿಗೆ ಬೇಕಾದೆ ಬಲ್ಲಿದಗು ನೆರವಾದೆ
ಅಡಿಗಡಿಗು ದೇವನಾ ಪೂಜೆಗೂ ಅನುವಾದೆ
ಪೊಡವಿಯೊಳು ಕಲ್ಪತರು ನಾನೆಂದು ಹೆಸರಾದೆ
ಒಡನೆ ನನ್ನನು ನೀವು ನೆಡುವ ಸಾಹಸ ಮಾಡೆ

† † † † † †

## ಮಂಗಲ ತೆಂಗು

ರಾಗ—ಮಾಂಡ ತಾಲ—ಕೆರವಾ

ಗಗನಕೆ ಮುದ್ದಿಪ ಮಂಗಲ ತೆಂಗೆ |
ನಿನ್ನಯ ಜೀವನದಿಂಗಿತವೇನು ||
ಸೊಗಸನು ಬೀರುವ ನಿನ್ನಯ ಸುಂದರ ಗರಿಗಳ |
ಸೃಷ್ಟಿಯ ಸೊಬಗೇನು ||೧||
ಪೊಡವಿಯ ಜನತೆಯ ಪೊರಿಯಲು |
ನಿನಗೀ ಕೈಲಾಸ ಪದವಿ ದೊರೆಯಿತೇನು ||
ಭಾರತಮಾತೆಯ ಬಡತನ ನೀಗಲು |
ಸಾಗರ ತೀರದೀ ಜನಿಸಿರುವೆ ||೨||
ರಾಗದಿ ಜನಗಳ ರುಜೆಯನು ಕಳೆಯುವ |
ಶ್ರೀ ಧನ್ವಂತರಿಯಾಗಿರುವೆ ||

ಒಡಲಿಗೆ ಸಿಹಿ ಜಲ ನೆತ್ತಿಗೆ ತೈಲವನುಣಿಸುವ |
ತಾಯಿಯು ನೀನಾಗಿರುವೆ ||೩||
ಧೃಡತರ ಸುಂದರ ಸುಖಕರ |
ಪೌಷ್ಟಿಕ ಶಾಖಾಹಾರವು ಆಗಿರುವೆ ||
ಮಂಗಲ ಕಾರ್ಯಕೆ ||
ಮೋದವ ಬೀರಲು | ಭರದಿಂ ಬೇಗನೆ ಬರುತಿರುವೆ ||೩||
ಗಂಗೆಯ ಧರಿಸಿದ | ಮಂಗಳ ಶಿವನೊಳು ||
ಫಲಗಳ ನೀಗಳೇ | ಕೊಡುತಿರುವೆ ||
ತಿಂಗಳ ಬೆಳಗಿನ | ಶಾಂತಿಗೆ ||
ಸರಿಸಮ ಸುಖವನು | ಸಂತತ ಕೊಡುತಿರುವೆ ||೫||
ರಂಗನ ಮುರಲಿಯ | ನಾದಕೆ ||
ನಲಿಯುತ | ಕುಲುಕುಲು ನಿನಗೆ ತರುವೆ ||
ಗುರುಗಳ ಚರಣಕೆ | ನಲಿಯುತ ನಮಿಸಲು ||
ಬೇಗನೆ ನಾ | ಬರುತಿರುವೆ ||೬||
ಗಿರಿಜಾ ಶಂಕರ | ಗೌರೀ ವರನಿಗೆ ||
ಕರ್ಪುರದಾರತಿ | ಬೆಳಗಿಸುವೆ ||
ಹರುಷದಿ ಹರಸುತ | ಬಾಲವೃಂದಕೆ ||
ಸುಪ್ರಸಾದವ | ಕೊಡುತಿರುವೆ ||೭||

# ಕಾಂಪೋಸ್ಟ ಗೊಬ್ಬರ

ಭಾವಗೀತ

ಗೊಬ್ಬರಾ ಹೊಸ ಗೊಬ್ಬರಾ । ಎತ್ತೆಮ್ಮಿ ಆಕಳ ಗೊಬ್ಬರಾ ॥
ಜನಜೀವನ ಶಾಂತಿಯ ಗೊಬ್ಬರಾ ॥
ಹೊಸದಾದ ಕಾಂಪೋಸ್ಟ ಗೊಬ್ಬರಾ ॥
ಹೊಲ ಕಸುವ ಮಾಡುವಂಥ ಗೊಬ್ಬರಾ ॥
ಕಸಕಡ್ಡಿ ಬೂದಿ ಮಣ್ಣುಗೂಡಿಸಿದಂತ ॥
ಹೆಸರಾದ ಬಿಸಿಯಾದ ಗೊಬ್ಬರಾ । ಹೊಸ ಗೊಬ್ಬರಾ ॥೧॥
ಅನ್ನ ಹಾಕುವಂಥ ಗೊಬ್ಬರಾ । ಮನೆ ಚಿನ್ನ ಮಾಡುವಂಥ ಗೊಬ್ಬರಾ॥
ಪುಣ್ಯ ಭಾರತ ನಮ್ಮ ಸರಕಾರ ಸರಿ ಎಂದು ॥
ಮಾನ್ಯ ಮಾಡೀದಂಥಾ ಗೊಬ್ಬರಾ ॥೨॥
ಬಡತನ ದೂಡುವ ಗೊಬ್ಬರಾ ॥
ಭೂಮಿ ಒಡಿಯರ ಭಾಗ್ಯದ ಗೊಬ್ಬರಾ ॥
ಕಡಿದು ಬೆಣ್ಣಿ ಹಾಲು ಮೊಸರು ನಮಗೆ ದಿನಾ॥
ಕಡಿಮೆ ಮಾಡದ ಪಶುಗೊಬ್ಬರಾ ಹೊಸ ಗೊಬ್ಬರಾ ॥೩॥
ನಾಡಿನ ಐಸಿರಿ ಗೊಬ್ಬರಾ । ಕೃಷಿನಾಡಿನ ಬೆಳೆಯೆಲ್ಲಾ ಭಂಗಾರಾ ॥
ಗಿಡಬಳ್ಳಿ ದ್ರಾಕ್ಷಿ ಮೋಸಂಬಿ ಕಿತ್ತಳಿ ಹಣ್ಣ ॥
ಬಾಳೀ ಮಡಿಗದು ಮೇಲಾದ ಗೊಬ್ಬರಾ । ಮಿಶ್ರಣ ಗೊಬ್ಬರಾ ॥೪॥
ಭತ್ತಾ ಬಿತ್ತಿ ಬೆಳಿಯು ನೋಡ ಶ್ರಿಂಗಾರಾ ॥
ಮುತ್ತಿನಂಥ ಹಿಂಡೀಯ ಗೊಬ್ಬರಾ ॥
ಒತ್ತಿ ಬೆಳೆದ ಕಬ್ಬು ರೈತರ ಎದೆ ಉಬ್ಬು ॥
ಮಡದಿ ಮಕ್ಕಳ ಮೈಭಂಗಾರಾ ॥
ನೋಡು ರೈತನ ಕೈಬೆರಳುಂಗರಾ ॥

# ಹೊಲಕ ಹೋದಾವಾ

ಚಾಲ—ಇನ್ನು ಯಾಕ ಬರಲಿಲ್ಲವ್ವಾ ಹುಬ್ಬಳ್ಳಿಯಾವಾ

ಇನ್ನೂ ಯಾಕ ಬರಲಿಲ್ಲವ್ವಾ ಹೊಲಕ ಹ್ವಾದಾವಾ ।
ಆರು ತಾಸು ಹೊತ್ತು ಮೀರಿ ಬಂದುಬಿಡಾವಾ ||ಪಲ್ಲ||

ಕಾರರೊಟ್ಟಿ ಕೆನೆಯ ಮೊಸರ ಬುತ್ತಿ ಒಯ್ದ್ಯಾವಾ ।
ಪುಂಡಿಪಲ್ಲೆ ಹಸಿಯಕಾಯಿ ಸವಿಯ ಮಾಡಾವಾ ||
ಹುಳ್ಳ ನುಚ್ಚ ಉಳ್ಳಿಗಡ್ಡಿ ಬಡ್ಸಿಕೊಳ್ಳ್ಯಾವಾ ।
ಸಜ್ಜಿರೊಟ್ಟಿ ತುಂಬಗಾಯಿ ಮೆಚ್ಚಿ ಜೇಡಾವಾ ||೧||

ಕೊಡ್ಡಕೆರವು ಕಗ್ಗ ಅಂಗಿ ಹಾಕಿಕೊಂಡಾವಾ ।
ಹೆಡಗಿ ಪಟಗಾ ವಾರಿಗಟ್ಟ್ಯ ಸುತ್ತಿಕೊಂಡಾವಾ ||
ಕ್ವಾರಿಮೀಸಿ ತಿರುವಿ ಪಸ್ನಿ ಮಾಡ್ಸಿಕೊಂಡಾವಾ ।
ಚೈನಬಾಜಿ ಕಲಿಯದಂತಾ ಸಾದಾ ಇದ್ದ್ಯಾವಾ ||೨||

ಮಣ್ಣಿನೊಳಗೆ ದುಡಿದು ದುಡಿದು ಮಣ್ಣು ಆಗಾವಾ ।
ಚಿನ್ನವನ್ನು ಹೊರಗೆ ತೆಗೆದು ಜಗಕೆ ನೀಡಾವಾ ||
ಮಾನ್ಯವಂತನೆಂದು ಜಗದಿ ಬೆಳೆದು ನಿಂತಾವಾ ।
ಭಾರತಾಂಬೆ ಸೇವೆಯನ್ನು ಬಿಡದೆ ಮಾಡಾವಾ ||೩||

ಚಳಿಯು ಮಳಿಯು ಗಾಳಿಯೊಡನೆ ಕುಸ್ತಿಯಾಡಾವಾ ।
ಛಲದಿ ಕಾದಿ ಬಲವ ತೋರಿ ಗೆದ್ದು ನಿಲ್ಲ್ಯಾವಾ ||
ಒಲುವಿನಿಂದ ಭೂಮಿತಾಯಿ ಸೇವೆ ಮಾಡಾವಾ ।
ಫಲದ ಆಶೆಯಿರದೆ ಜಗಕೆ ಸೇವೆ ನೀಡಾವಾ ||೪||

ಬೆಳ್ಳಿಗುಂಡಿನಂತಾ ಎತ್ತ ಹೊಲಕೆ ಓದಾವಾ |
ಗುಳ್ಳಿ ಸರವ ಎತ್ತುಗಳಿಗೆ ಕಟ್ಟಿಕೊಂಡಾವಾ ||
ಹಳ್ಳದ್ದೊಲದ ರಂಟೆಯನ್ನು ಹೊಡೆಯುತಿರುವಾವಾ |
ಬಲಾರಿ ಪದವ ಹಾಡಿ ದಣಿವ ಕಳೆದುಕೊಳ್ಳಾವಾ ||೫|

ರಂಟೆ ಹೂಡಿ ಬಂಟನಾಗಿ ಹೊಡೆಯುತಿರುವಾನಾ |
ಕಂಟಿಕಸವ ದಂಟು ಕೋಲಿ ಕಿತ್ತಿಹಾಕಾವಾ ||
ಎಂಟು ದಿಕ್ಕು ಈಂಟುವಂತೆ ಪದವ ಹಾಡಾವಾ |
ಬಂಟ ದಣುವು ಅಂಟದಂತೆ ದುಡಿಯುತಿರುವಾವಾ ||೬||

ಬೇಳೆಕಾಳು ಸೇಂಗಾ ಎಳ್ಳು ಎಣ್ಣೆಕಾಳವಾ |
ಜೋಳ ಸಜ್ಜಿ ರಾಗಿ ನವಣೆ ಧಾನ್ಯ ಒಕ್ಕಾವಾ ||
ಬಾಳಮಾನ ಕಾಯಲಿಕ್ಕೆ ಹತ್ತಿ ಬೆಳೆಯುವಾ |
ಮೇಳದಿಂದ ಜಗವ ಜೋಕೆ ಮಾಡುತಿರುವಾವಾ ||೭||

ಮನೆಗೆ ಬಂದು ಮಮತೆಯಿಂದ ನೀರ ಬೇಡಾವಾ |
ಹಣೆಸ ಬರಲು ನಕ್ಕು ನಗಿಸಿ ಕೈಯ ತೊಳಿಯಾವಾ ||
ಜನನಿ ಭೂಮಿದೇವಿ ಕಥೆಯ ಹೇಳುತುಣ್ಣಾವಾ |
ಮನದ ಶಾಂತಿಗಾಗಿ ಯೊರಗಿ ಗೊರಕೆ ಹೊಡಿಯಾವಾ ||೮||

ಹಿರಿಯ ರೈತ ನೇಗಿಲ್ಯೋಗಿಯೆನಿಸಿಕೊಂಡಾವಾ |
ಬರಿದು ಕಾಲ ಕಳೆಯದಂತೆ ದುಡಿಯುತಿರುವಾವಾ ||
ಸರಳ ಹಾದಿ ಹಿಡಿದು ನಡೆದು ಹೆಸರು ಪಡೆದಾವಾ |
ಕರೆದು ದಾನ ಮಾಡಿ ಪುಣ್ಯಗಳಿಸಿಕೊಂಡಾವಾ ||೯||

ಅನ್ನ ಅರಿವೆ ನೀಡಿ ಜಗವ ಜೋಕೆಗೈದಾವಾ |
ಚಿನ್ನದಂತ ಮನಸಿನಿಂದ ಶಾಂತ ಹೊಂದಾವಾ ||

# ಸಕ್ತಿ ಶಿಕ್ಷಣ

ಭಾವಗೀತೆ

ಇಂದು ನಾವು ಎಲ್ಲರು ಒಂದು ಮನದಿ ಕೂಡುವಾ ।
ಒಂದೆ ತಾಯಿ ಮಕ್ಕಳಾಗಿ ಸಾಲೆ ಮನೆಯ ಸೇರುವಾ ॥ಪ॥
ಓದು ಬರೆಹ ಕಲಿಯುವಾ ಸತತ ವಿದ್ಯೆ ಪಡೆಯುವಾ ।
ಸಕಲ ದೇಶಕೆ ಬೀರುವಾ ಸರಸ ಮಾರ್ಗ ಕಾಣುವಾ ॥
ವಿದ್ಯೆಯಿಂದ ಮಾನವು ವಿದ್ಯೆಯಿಂದ ಸ್ಥಾನವು ।
ವಿದ್ಯೆಯಿಂದ ಜ್ಞಾನವು ವಿದ್ಯೆಯಿಂದ ಸರ್ವವು ॥
ವಿದ್ಯೆರಹಿತ ಬಾಳು ಏನುಯಿದ್ದು ಹಾಳು ।
ಬಾಳಿನಲ್ಲಿ ತಾಳು ಶಿಕ್ಷಣದ ಮೇಳು ॥
ಸತ್ಯ ಹಿಂಸಾಮೂರ್ತಿ ಭಾರತದ ಜ್ಯೋತಿ ।
ಮಕ್ಕಳಲ್ಲಿ ಪ್ರೀತಿ ಜಗಕೆ ಬಂತೋ ಕೀರ್ತಿ ॥
ಸಣ್ಣ ಬಾಲರೆಲ್ಲರೂ ಶಾಲೆ ಕಲಿಯಲೆಂದು ।
ಸಕ್ತಿ ಕಾಯ್ದೆ ತಂದು ಅಯ್ತು ವರ್ಷಾಯ್ತಿಂದು ॥
ಚಿಕ್ಕತನದಿ ಶಿಕ್ಷಣ ಪಡೆಯಬೇಕು ತಕ್ಷಣ ।
ಆರು ವರುಷ ವಯಸಿನ ಮಕ್ಕಳಲ್ಲಿ ಲಕ್ಷಣ ॥
ಹನ್ನೊಂದು ವರುಷದ ಬಾಲರು ನಾಲ್ಕನೆ ವರ್ಗ ಮುಗಿಸುವರು ।
ಕಲಿತು ಜಾಣರಾಗುವರು ಮುಂದಿನ ಮಾರ್ಗ ಕಾಣುವರು ॥
ಸದ್ಯದ ಸರಕಾರದವರು ಸಾಕಷ್ಟು ಶಾಲೆ ತೆರೆದು ।
ಮಕ್ಕಳ ಲೆಕ್ಕ ಬರೆದು ಬರತಾರ ಶಿಕ್ಷಕ ಜನರು ॥
ಪುಕ್ಕಟೆ ಶಿಕ್ಷಣ ಕೊಡ್ತಾರು ಹೆಚ್ಚಿಗೆ ಶಿಕ್ಷಕರಾಗ್ತಾರು ॥
ಶಿಕ್ಷಣ ಸಾಹೇಬರ ಬರತಾರು ಪೆನ್ಸಿಲ ಪಾಟಿ ಕೊಡತಾರು ॥
ಏನು ಇಲ್ದ ಕಲಿಸತಾರು ಬರಬೇಕಂತ ಹೇಳ್ತಾರು ।
ನಾವೇಕೆ ಹೋಗೋಣಂತಾರು ನಮಗೇಕ ಬೇಕಂತಾರು ॥

ದನಕರ ಕಾಯಿಲಿಕೆ ಹಚತಾರು ದುಡಿದು ದುಡಿದು ಸಾಯ್ತಾರು |
ಸರಿಯಾಗಿ ತಿನ್ನದೆ ಇಡತಾರು ಮುಂದಿ ಹೆಣಕ ಬಡಿತಾರು ||
ಸಕ್ತಿಗೊಳಗಾದ ಮಕ್ಕಳಿಗೆ ಶಾಲೆಗೆ ಕಳಿಸದ ಹಿರಿಯರಿಗೆ |
ನೋಟೀಸ ಬರತಾವ ಮನೆಮನೆಗೆ ದಂಡ ಬೀಳತದವರಿಗೆ ||
ಏನು ಅಡಚಣಿ ಹೇಳದೆ ಕಾಯ್ದೆದೊಳಗೆ ಸಿಗದೆ |
ಹಾನಿಯೊಳಗೆ ಬೀಳದೆ ಶಾಲೆಗೆ ಕಳಿಸರಿ ಮಕ್ಕಳಿಗೆ ||
ಪರಕಿಯರಾಳಿಕೆ ನಿಂತು ಜನತಾ ಸರಕಾರ ಬಂತು |
ಎಲ್ಲರು ಕಲಿಯೋದ ಬಂತು ಸ್ವರಾಜ್ಯ ಉಳಿಸೋದ ಬಂತು ||

* * * * *

## ದೈವ ಎಂದು ಕೂಡ್ರಬ್ಯಾಡ್ರಿ

ತಾಲ—ಝಂಪಾ ತಾಲ—ಮಾಲಕೌಂಸ

ದೈವ ಮೈದೋರುವುದು ದಿನ ನಿತ್ಯದಲ್ಲಿ
ಜೀವನದ ನಾಟಕದಿ ಪ್ರತಿ ದೃಶ್ಯದಲ್ಲಿ ||ಪ||
ದೇವಗುಣ ಪೂರ್ಣಂಗೆ | ಸುಖ ರೂಪದಲ್ಲಿ ||
ಧೀವಿಪುಲ ಕುಶಲಂಗೆ | ಗುರುರೂಪದಲ್ಲಿ ||
ಮೂರ್ಖಂಗೆ ಘೋರ | ಪೀಡೆಯ ರೂಪದಲ್ಲಿ ||
ದುಷ್ಕರ್ಮ ನಿರತಂಗೆ | ರಿಪು ರೂಪದಲ್ಲಿ ||೧||
ತನ್ನೊಡಲ ಕೊರತೆಗಳ | ಹುಡುಹುಡುಕಿ ತೆಗೆದು ||
ಇನ್ನೊಮ್ಮೆ ತಪ್ಪಾಗದಂತೆ | ಬಗೆಬಗೆದು ||
ಕೃತಿಯೆಂಬ ಪ್ರಾರ್ಥನೆಯ | ಮಾಳ್ಪನರವರಗೆ ||
ಅತಿಶಯ ಫಲವ | ದೈವವಿತ್ತರದು ಬೆರಗೆ ? ||೨||
ಸ್ವ ಸಹಾಯ ಶೂರಂಗೆ | ಕಂಡಲ್ಲಿ ಗೆಲವು ||
ಸ್ವ ಸಹಾಯವನು | ಬಿಟ್ಟರಿನ್ನುಂಟೆ ಬಲವು ? ||
ಸ್ವಾತ್ಮಾವಲಂಬಿಯಿರ್ಪೆಡೆ | ಯದುವೆ ಸ್ವರ್ಗ ||೩||

# ಬನ್ನಿರಿ ಶಾಲೆ ಕಲಿಯುವದಕ

## ಹೆಜ್ಜಿಪದ

ಬನ್ನಿರಿ ಅಣ್ಣಾ ಬನ್ನಿರಿ ಅಕ್ಕಾ । ಶಾಲೆಯ ಕಲಿಯುವದಕ ||೧||
ಹೆಸರಿಗೆ ಜನವು ನೋಟಿಕೆ ಗಣವು । ಅರಿಯದ ಜನಗಣವು ||೨||
ಕಲಿಯದ ಜನ ಕಾಣದ ಮನ । ದೇಶಕ ದುರಮರಣ ||೩||
ಕಣ್ಣಿದ್ದು ಕುರುಡ ಜ್ಞಾನಿದ್ದು ಬರಡ । ನಿಜ ಜ್ಞಾನಿಲ್ಲದಕ ||೪||
ಕಣ್ಣಿನ ಕತ್ತಲೆ ಮನಸಿನ ಕತ್ತಲೆ । ಬೇಗನೆ ಕಳೆಯುವದಕ ||೫||
ದುಡಿದು ಬಂದು ಉಂಡು ತಿಂದು । ಸಾಕ್ಷರರಾಗುದಕ ||೬||
ಸಾಕ್ಷರರಾಗಿ ದೀಕ್ಷೆಯರಾಗಿ । ಮೋಕ್ಷವ ಪಡೆಯುವದಕ ||೭||
ಅಕ್ಷರ ಜ್ಞಾನ ಉಳಿಸಿತೊ ಮಾನ । ಚೆಂದದ ಜೀವನಕ ||೮||
ಓದಲು ಕಲಿತು ಬರೆಯಲು ಕಲಿತು । ಭಾಗ್ಯವ ಬೆಳೆಸುವದಕ ||೯||
ಶಿಕ್ಷಕ ತಕ್ಷಣ ಕೊಡ್ತಾನ ಶಿಕ್ಷಣ । ನಾಗರಿಕನಾಗುವದಕ ||೧೦||
ಕಾಲಕೆ ತಕ್ಕ ಬಾಪುಜಿ ಸಿಕ್ಕ । ಮುಂದಕೆ ಬರುವುದಕ ||೧೧||
ರೈತನರಾಜ್ಯ ನಮಗೆಲ್ಲ ಪೂಜ್ಯ । ಕಡೆತನುಳಿಸುದಕ ||೧೨||
ಅಂದಿನಭಾರತ ಇಂದಿನಭಾರತ । ಹೊಂದಿಕೆಯಾಗುದಕ ||೧೩||
ಎಡಗೈಬೆರಳ ಒತ್ತಿವಸರಳ । ಒಯ್ದಾರಗಗನಕ ||೧೪||
ಇದನೆಲಅಳಿದು ಸುಖವಾಗಿ ಬೆಳೆದು । ನಡೆಯಿರಿ ಕಲಿಯುದಕ ||೧೫||

§ † § †§† † §

ಸಾಕವಿತಾ ಸಾವನಿತಾ ।
ಯಶ್ಯ ಸ್ಮರಣೇನ ದರ್ಶನೇನಾಪಿ ||
ಕವಿಹೃದಯಂ ವಿಟಹೃದಯಂ ।
ಸರಳಂ ತರಳಂ ಚಭವತಿ ||

—ಸುಭಾಷಿತ

# ಬಲಾರಿ ಪದಗಳು

೧ ಬೆಳ್ಳನ ಬಿಳಿ ಹೋರಿ ಬೆಳ್ಳಿಯ ಬಾರಕೋಲ ಹಳ್ಳದ ಹೊಲಕ ನಡದಾವ್ರೋ ಬಸವಣ್ಣನ ತೆಳ್ಳನ ಹೊಟ್ಟೆ ಹಸದಾವ ಹಳ್ಳದ ಹೊಲಹರಗೋಣ.

೨ ತುಂಬಿದ ಹೊಳಿಯಾಗ ಕೊಂಬ ಕಾಣುನ್ಯಾರ ಬಂಗಾರ ಇಣಿಯ ಬಸವಯ್ಯಾ ಬಂಗಾರದ ಇಣಿಯ ಬಸವಯ್ಯಾ ಬರುವಾಗ ತುಂಬಿದ ಗಂಗಾ ಬದಿಗಾಗಿ

೩ ಬಸವಯ್ಯಾ ಹುಟ್ಟಲಿ ಹೊಸ ಪ್ಯಾಟಿ ಕಟ್ಟಲಿ ರಸಗೊಳ್ಯಾನ ಕಬ್ಬ ಬೆಳಿಯಲಿ ರಸಗೊಳ್ಯಾನ ಕಬ್ಬ ಬೆಳಿಯಲಿ ಬಸವಯ್ಯಾ ನಿನ್ನ ಕೀರ ಎಳಿಯಲಿ

೪ ಬಸವಯ್ಯಾ ನಿನ್ನ ಪಾದ ಹಸನಾಗಿ ತೊಳದೇವ ಹಸರ ಗಲೀಪ ಹೊಲದೇವ

೫ ಯಾಕವ್ವ ನನ್ನ ಜೀವ ಎಲಿ ಅಡಕಿ ಒಲ್ಲದ ಜಾತ್ರಿಗಿ ಹೋದಾವ ಬರಲಿಲ್ಲ ಜಾತ್ರಿಗೆ ಹೋದಾವ ಬರಲಿಲ್ಲ ನನ್ನ ಗೆಳೆಯಾ ರಾತ್ರಿ ಹೆಂಗ ಗಳಿಯಲಿ

೬ ಸರದಾರ ನನ್ನ ಗೆಳೆಯಾ ಸರಗಿ ಮಾಡಿಸಿ ಕುಡೋ ಸರ ಗಿಂದ ನೀ ತೆಳಗ ಗುಳದಾಳೋ ಸರಗಿಂದ ನೀ ತೆಳಗ ಗುಳದಾಳಿ ಇಟ ಕೊಂಡ ಸರಿ ಗೆಳೆತರ ಒಳಗ ಇರತೇನ

೭ ಬಾಳಿ ಪಟ್ಟದ ಸೀರೆ ಬಾಯಾಗ ಬಿಳಿ ಎಲೆಯ ಬಂದಿದ್ದಾ ಳೆನ ಜಾತ್ರಿಗೇ ಎಲೆ ಬಾಲಿ ತಂದಿದ್ದಾಳೇನ ಪರಿಮಾಳ

೮ ಕೂಡಿದ ಕುಡಿ ಹುಬ್ಬ ತೀಡಿದ ಬೋತಾಲಿ ಕಾಡಿಗಿಗಣ್ಣ ನಡ ಸಣ್ಣ ನಡ ಸಣ್ಣ ಎಲ ಹುಡುಗಿ ಕೂಡಿದಂಗ ಇರಲಿ ಗೆಳಿತಾನ

## ಹುಬ್ಬಳ್ಳಿಯಲ್ಲಿ ಆದ ಹೂ, ಹಣ್ಣು, ಕಾಯಿಪಲ್ಲೆ ಪ್ರದರ್ಶನ ದಿನಾಂಕ— ೧೩—೯—೫೮ ಕ್ಕೆ ಜರುಗಿದಾಗ ಹಾಡಿದ

# ಲಾವಣಿ ಪದ್ಯ

ಹಾ ಹಾ ಹಾ ಹೂ, ಹಣ್ಣು ಕಾಯಿಪಲ್ಲೆಗಳ, ಸೊಗವು ಮನ ಸೆಳೆಯುವದು । ಹೆಣ್ಣಿನಂತೆ ಹಣ್ಣಿನ ರಸ ಪಾನವು, ಕಣ್ಣು ಮನಗಳ ನ್ನೆಳೆಯುವದು ||ಪ||

||ಚಾಲ|| ಹೆಣ್ಣು ಹೊನ್ನು ಮಣ್ಣುಗಳಿಗಿಂತಾ ।
ಹಣ್ಣೀನ ಪ್ರೀತಿ ಹೆಚ್ಚಂತ ।।
ಬಣ್ಣಿಸಿದ ಕವಿಯು ಮತಿವಂತ ।
ಹೆಣ್ಣೀಗೆ ಸರಿಯು ಇಲ್ಲಂತ ||

ಹಣ್ಣಿನ ಗಿಡಗಳ ಹೆಚ್ಚು ಬೆಳಿದರೆ । ಸ್ವರ್ಗ ಭೂಮಿಗಿಳಿಯುವ ದಂತ ||೧||

||ಚಾಲ|| ಮೋಸಂಬಿ ಲಿಂಬಿ ನಾರಂಗಿ ।
ರಸಬಾಳಿ ಮಾವು ದಾಳಂಬಿ ||
ವಸುಧೀಗೆ ಹಣ್ಣು ಬೇಕಾಗಿ ।
ರಸನೇಗೆ ಬಹಳ ರುಚಿಯಾಗಿ ||

ಶೆಯುವ ಹಣ್ಣಿನ ಗಿಡಗಳ ಹಚ್ಚಿದ ರಸಿಕರೆ ಭುವನದಿರಸ ಯೋಗಿ ||೨||

ಹೂವಿನ ಗಿಡಗಳು ಸ್ತ್ರೀ ಪುರುಷರ ಸುಖ ಜೀವನ ನಿಜ ಸಾಮ ಗ್ರಿಗಳು । ಪರಿಮಳ ಚೆಲ್ಲುವ ಮಲ್ಲಿಗಿ ಸಂಪಿಗಿ ಶೇವಂತಿಗಿಹೂ ಮದ ರಂಗಿಗಳು ।

||ಚಾಲ||  ಶ್ರಿಂಗಾರ ಸಾಗರದ ನೋಟಾ ।
ಹುಬಳ್ಳಿ ಬನದ ಕುಣಿದಾಟಾ ।।
ಚೀನಿ ಜನರುಮಾಡಿ ಅರಊಟಾ ।
ಬೇಡುವರು ಹೂವಿನ ರಸದೂಟಾ ||

ಜಪಾನದಲ್ಲಿ "ಸಕುರಾ" ಎಂಬುವಹೂ ಸ್ತ್ರೀಯರಬಸುರಿನ ಬಯಿಕೆಯದು ||೩||

ಮದುವೆ ಮುಂಜಿ ದೇವರ ಪೂಜೆಗೆಹೂ ಮೊದಲು ಬೇಕು ಧರ್ಮಕೆ ಮೂಲಾ । ಎದೆಯ ಮೇಲೆ ಹೂ ಧರಿಸುವ ನೆಹರೂ ಪ್ರೀತಿ ಕೆಂಪು ಹೂವಿನ ಮೇಲಾ ।

||ಚಾಲ||  ಹೂ ಮುಡಿಯಲು ಮನದಾನಂದಾ ।
ವನವಾಗಲಿ ಮನೆ ಮನೆ ಮುಂದಾ ||
ಕತ್ತಲಕೆ ದೀಪ ಆನಂದಾ ।
ಹಿತ್ತಲಕೆ ತೋಟ ಬಹು ಚಂದಾ ||

ಎತ್ತಲು ಹುಬನ ಬಳ್ಳಿಗಳಿಂದ ನಾಡ ಶೋಭೆಯನು ಮಾಡುವದು ||೪||

ಕಾಯಿಪಲ್ಲೆಯ ಕೌತುಕವ ಹೇಳುವೆನು । ಕೇಳಿರಿ ಎಲ್ಲರೂ ಕಿವಿಗೊಟ್ಟು || ಕಾಯದ ಶಕ್ತಿಯ ಬೆಳಿಸುವ । ಕಾಯಿಪಲ್ಲೆಗಳ ಬೆಳೆಯಿರಿ ಪಣ ತೊಟ್ಟು ||

||ಚಾಲ||  ಪಪ್ಪಾಯಿ ಮೆಂತೆ ಸಬ್ಬಸಗಿ ।
ಚವಳಿ ಹೀರಿ ಟೊಮೆಟೊ ಭೆಂಡಿ ||
ಹರವಿ ಸವತಿ ಕಿರಕಸಾಲಿ ತೊಂಡಿ ।
ಹಾಗಲಕಾಯಿ ಬದನಿ ಮೂಲಂಗಿ ||

ಹೂ ಮಳೆಗರಿಯುವ ಲಾಲಭಾಗ ಸಿರಿ ಬೆಂಗಳೂರಿನಲಿ ನೋಡ್ಹು ವದು ಹೂಬಳ್ಳಿಗಳಿಂ ಮೆರೆವುದರಿಂದಲಿ ಹುಬ್ಬಳ್ಳಿಯ ಸಿರಿ ಹೆಚ್ಚಿ ಹುದು ||೫||

||ಚಾಲ|| ಶುರಲೋಕ ನಂದನವನವು ।
ಶ್ರೀಕೃಷ್ಣಗೆ ವೃಂದಾವನವು ||
ಸ್ತ್ರೀ ಪುರುಷರಿಗೆ ಹೂಬನವು ।
ಈ ಲೋಕದಲ್ಲಿ ಸುರತರುವು ||

ಬಣ್ಣಿಸಿ ಹಾಡುವ ಹುಕ್ಕೇರಿಯ । ಬಾಳಪ್ಪನ ಪದದಾಳಿಂಬ ರವು ||೬||

★ ★ ★ ★ ★

## " ಸಮೃದ್ಧಿ "

ರಾಗ—ತಿಲಕಕಾಮೋದ ತಾಲ—ಏಕ್ತಾ

ಬರಲಿ ಭೂಮಿಗೆ ವಿಲಾಸ । ರೈತರ ಬಾಳಿಗೆ ತೋಷ ||
ಪಡಿಯುವೆನಾ ನೋಡಿ ಹರುಷ ||ಪ||

ಹೊಳಿಗಳು ತುಂಬಿ ಸದಾ ಹರಿಯತಿರಲಿ ಭೂಪ್ರದೇಶ ।
ಮಳೆ ಬೆಳೆ ಸ್ವರಾಜ್ಯ ತೋಷ ||೧||

ನಗಿಸುತ ಮಳೆ ವರುಷಿಸಲಿ ಹೊಲಗಳೆಲ್ಲ ಪುಳುಕಿಸಲಿ ।
ಸಸಿಗಳು ತಾಳಿ ಸ್ವಹಾಸಾ ||೨||

ಬನಗಳು ಹೂ ಗಂಧವನು ಚಿಮ್ಮುತಿರಲಿ ಚಿಗುರಿ ಅರಳಿ ।
ಸುಳಿಯಲಿ ತಂಗಾಳಿ ತೇಲಿ ||೩||

ಕೃಷಿಕರು ಸಮ್ಮೋದಿಸಲಿ ಮಳೆಯ ಬೆಳೆಯ ಶ್ರೀವಿಲಾಸ ।
ನಲಿಯಲಿ ನೋಡಿ ಪ್ರದೇಶ ||೪||

# ಒಕ್ಕಲಿಗರು ನಾವು (ಡಪ್ಪಿನಪದ)




ಒಕ್ಕಲಿಗರು ನಾವು ಒಕ್ಕಲಿಗರು।
ಮಣ್ಣಿನಲ್ಲಿ ಧಾನ್ಯ ಬೆಳೆಸಿ ||
ಅನ್ನ ಅರಿವೆ ಅರಿವುಗಳಿಸಿ।
ಬನ್ನ ಬಟ್ಟು ಜಗಕೆ ಕೊಟ್ಟು ||
ಜಗದ ಕಣ್ಣು ಎನಿಸಿ ಮೆರೆವ।
ಒಕ್ಕಲಿಗರು ನಾವು ಒಕ್ಕಲಿಗರು ||೧||

ಮಳೆಯು ಛಳಿಯು ಬಿಸಿಲು ಅನ್ನದೆ।
ಹಗಲು ಇರುಳು ಶ್ರಮಿಸಿಬಿಡದೆ ||
ಕುಂಟೆ ರಂಟೆಯಿಂದ ಎತ್ತಿ।
ಬಿತ್ತಿ ಎತ್ತು ಎಮ್ಮಿ ಸಾಕಿ ||
ಹೊತ್ತು ಜಗದ ಹೊಣೆಯ ಸಹಿಪ।
ಒಕ್ಕಲಿಗರು ನಾವು ಒಕ್ಕಲಿಗರು ||೨||

ಕೊಳೆಯ ಕಸವ ಕೂಡಿ ಹಾಕಿ।
ಕಳಿಸಿ ರಸವ ಬೆಳೆಗೆ ಹಾಕಿ ||
ಬಲಿತ ಬೆಳೆಯ ಕಳೆಯ ನೋಡಿ।
ಮನದ ಅಳಲ ಕೊಳೆಯ ದೂಡಿ ||
ಸುಗ್ಗಿ ಹಿಗ್ಗಿನಿಂದ ಕುಣಿವ।
ಒಕ್ಕಲಿಗರು ನಾವು ಒಕ್ಕಲಿಗರು ||೩||

ಹಿಡಿಯ ಧಾನ್ಯ ಬಿತ್ತಿ ಪಡಿಯ।
ಬಂಡಿಯಿಂದ ಹಗೆಯ ತುಂಬಿ ||
ಧಾನ್ಯ ಕಣಜವೆನಿಸಿ ಜಗದ।
ಪ್ರಾಣಿಗಳಿಗೆ ಉಣಿಸಿ ನಲಿವ ||
ಒಕ್ಕಲಿಗರು ನಾವು ಒಕ್ಕಲಿಗರು ||೪||

ಭೂಮಿ ದೇವಿ ನಮ್ಮ ತಾಯಿ ।
ಮೇಘರಾಜ ನಮ್ಮ ತಂದೆ ॥
ವಿಶ್ವವೆಮ್ಮ ಬಂಧು ಬಳಗ ।
ಸೇವೆಯೆಮ್ಮ ನಿತ್ಯ ಕರ್ಮ ॥
ತ್ಯಾಗವೆಮ್ಮ ಸತ್ಯ ಧರ್ಮ ।
ಒಕ್ಕಲಿಗರು ನಾವು ಒಕ್ಕಲಿಗರು ॥೫॥

ಜಗವು ತೆಗಳಿ ಬೊಗಳಲೇನು ।
ಜಗವು ಹರಸಿ ಹಾಡಲೇನು ॥
ತಾಗಿ ಬಾಗಿ ಜಗವ ಹರಸಿ ।
ಅಂಜದಳುಕದಂಥ ಯೋಧ ॥
ತ್ಯಾಗ ಭೋಗಿ ಕರ್ಮಯೋಗಿ ।
ಒಕ್ಕಲಿಗರು ನಾವು ಒಕ್ಕಲಿಗರು ॥೬॥

ವಿಶ್ವಚಿಂತೆ ಎಮಗೆ ಇರಲಿ ।
ನಮ್ಮ ದುಡಿಮೆ ವಿಶ್ವಕಿರಲಿ ॥
ವಿಶ್ವಕಾಗಿ ದುಡಿಯೆ ಮಡಿಯೆ ।
ವಿಶ್ವವೆಮ್ಮ ನೆತ್ತಿಕೊಳದೆ ॥
ವಿಶ್ವಧರ್ಮ ನೆಲಸಿ ನಿಲದೆ ।
ಒಕ್ಕಲಿಗರು ನಾವು ಒಕ್ಕಲಿಗರು ॥೭॥

ಕೆಸರಿನಲ್ಲಿ ನಮ್ಮ ಕುಸುರು ।
ಕೊಳೆಯ ಕಸದಿ ರಸದ ಎಸರು ॥
ಹೊಯ್ದು ಮಣ್ಣ ಬಸಿರಿನಿಂದ ।
ಹಸಿರು ಹರಿಸಿ ಫಲವ ತೆಗೆವ ॥
ಕಲೆಯ ನೆಲೆಯ ಅರಿತ ಶಿಲ್ಪಿ ।
ಒಕ್ಕಲಿಗರು ನಾವು ಒಕ್ಕಲಿಗರು ॥೮॥

# ಕಾಂಪೋಸ್ಟ ಗೊಬ್ಬರ ಮಾಡುವ ರೀತಿ

ತಾಲ—ಕೆರವಾ

ಗೊಬ್ಬರವ ಮಾಡು ಗೆಳೆಯಾ ।
ಅಬ್ಬಬ್ಬ ! ನೋಡು ಬೆಳೆಯಾ ॥ಪ॥

ಉದ್ದಳತೆ ಹತ್ತು ಫೂಟು ।
ಅಗಲಳತೆ ಆರು ಫೂಟು ॥
ತಗ್ಗಿರಲಿ ಮೂರು ಫೂಟು ।
ಗೊಬ್ಬರದ ಕುಣಿಯು ಮಾಟು ॥೧॥

ಆರಿಂಚು ಇರಲಿ ತರವು ।
ಕಸಕಡ್ಡಿಯನ್ನೆ ಹರವು ॥
ತುಳಿ ತುಳಿದು ನೀರು ಸುರುವು ।
ಶೆಗಣಿಯುನೆ ಕಲಿಸಿ ಹರವು ॥೨॥

ತುಸುಬೂದಿ ಚೆಲ್ಲು ತರದಿ ।
ಮೂರಿಂಚು ಮಣ್ಣು ಕ್ರಮದಿ ॥
ಇದರಂತೆ ನಾಲ್ಕು ಕ್ರಮದಿ ।
ಪೂರ್ತಿ ತರಗೊಳಿಸೊ ಭರದಿ ॥೩॥

ಮಾಸೆರಡು ಮಾಸ ಕಳೆಯೆ ।
ಕುಸಿಬೀಳಲದುವೆ ಕೊಳೆಯೆ ॥
ಮತ್ತೊಂದು ತರವ ಸೆಳೆಯೆ ।
ಕಾಂಪೋಸ್ಟವಾಯ್ತು ತಿಳಿಯೆ ॥೪॥

ನಾಲ್ಕೈದು ಮಾಸ ದಾಟೆ ।
ಹೊಲಕ್ಹಾಕಿ ಹೊಡಿಯೊ ರಂಟೆ ॥
ಹದಗೊಳಿಸು ಒಡೆಯ ಹೆಂಟೆ ।
ಕಡಿ ಕಂಟೆ ಹರಗೊ ಕುಂಟೆ ॥೫॥

ಹದ ನೋಡಿ ಬೀಜ ಬಿತ್ತು ।
ಸಸಿ ನೋಡು ಬರುವದೆಂತು ॥
ಕಳೆ ಕಸವನೆಲ್ಲ ಕಿತ್ತು ।
ಬೆಳೆಗಿಲ್ಲ ನೋಡು ಕುತ್ತು ॥೬॥

ಥಳಥಳಿಸಿ ಬೆಳೆವ ಬೆಳೆಯಾ ।
ಮಗಿಯಂಥ ದುಂಡು ತೆನಿಯಾ ॥
ತಲೆಬಾಗಿ ಕರೆವ ಪರಿಯಾ ।
ನೀ ನೋಡಿ ಹಿಗ್ಗು ಗೆಳೆಯಾ ॥೭॥

ದುಡಿತಕ್ಕೆ ತಕ್ಕ ಫಲವು ।
ಬಡತನಕೆ ಇಲ್ಲ ಅನುವು ॥
ಗೊಬ್ಬರದಿ ರೈತ ನಿರುವು ।
ಕಾಂಪೋಸ್ಟ ಬಲವು ಗೆಲವು ॥೮॥



ಮಣ್ಣುವಿಲ್ಲದ ಭೂಮಿ ಸುಣ್ಣವಿಲ್ಲದ ವಿಳ್ಳೆ
ಹೆಣ್ಣಿಲ್ಲದವನ ಸಂಸಾರ ಮಳಲೊಳಗೆ
ಎಣ್ಣೆ ಹೊಯ್ದಂತೆ ಸರ್ವಜ್ಞ

# ಪ್ರ ಗ ತಿ ಪ ಥ

ಧಾಟಿ—ಹಾಲು ಹಳ್ಳ ಹರಿಯಲಿ

ಪ್ರಗತಿ ಪಥವು ತೋರಲಿ ।
ಪ್ರಜಾರಾಜ್ಯ ಮೆರೆಯಲಿ ॥
ನುಡಿಯು ನಡೆಗೆ ಕೂಡಲಿ ।
ರಾಮರಾಜ್ಯ ಬೆಳಗಲಿ ॥೧॥

ಧರ್ಮ ಶ್ರದ್ಧೆ ಬೆಳೆಯಲಿ ।
ತನ್ನ ತಾನು ತಿಳಿಯಲಿ ॥
ತನ್ನ ದೋಷ ಅರಿಯಲಿ ।
ಜಗದ ನಿಂದೆ ಅಳಿಯಲಿ ॥೨॥

ಮಿತದ ಬಾಳು ಬೆಳಗಲಿ ।
ಹಿತದ ಬಾಳು ಹರಡಲಿ ॥
ನ್ಯಾಯ ನೀತಿ ಕಾಯಲಿ ।
ಸತ್ಯ ಶಾಂತಿ ನೆಲಸಲಿ ॥೩॥

ಕಷ್ಟಪಟ್ಟು ದುಡಿಯಲಿ ।
ಸುಖದ ಬೆಟ್ಟವೇರಲಿ ॥
ತುಷ್ಟಿ ಪುಷ್ಟಿ ಸಾರಲಿ ।
ಜ್ಞಾನ ವೃಷ್ಟಿ ಸುರಿಯಲಿ ॥೪॥

ಧರ್ಮ ಸೂರ್ಯ ಮೂಡಲಿ ।
ಸೌಖ್ಯ ಪ್ರಭೆಯು ಹರಡಲಿ ॥
ಇಂಥ ಪ್ರಗತಿ ಹೆಚ್ಚಲಿ ।
ವಿಶ್ವ ಶಾಂತಿ ಪೊಂದಲಿ ॥೫॥

# ಗದ್ದೆಗೆ ಹೋದಾಂವಾ !

ಚಾಲ— ಇನ್ನೂಯಾಕ ಬರಲಿಲ್ಲವಾ ಹುಬ್ಬಳ್ಳಿಯಾವಾ

ಇಷ್ಟೊತ್ತಾತ್ತು ಬರಲಿಲ್ಯಾಕ ಗದ್ದಿಗೆ ಹೋದಾಂವಾ ।
ಬೆಳಿಗ್ಗೆ ಎದ್ದು ಎತ್ತಿನ ಬಿಟ್ಟುಕೊಂಡು, ಗಳೇಕ ಹೋದಾಂವಾ ।

ರಂಟೆಯ ಹೂಡಿ ಉಂಕಿ ಮಾಡಿ, ಬರತೇನಂದಾಂವಾ ।
ಹೆಂಟೆಯನ್ನು ಕೊರಡು ಹೂಡಿ, ಒಡೆದುಬರಾಂವಾ ॥
ಗದ್ದೆಯ ತುಂಬ ಸೂಸು ಮಣ್ಣು, ಮಾಡುವೆನಂದಾಂವಾ।
ಅಬ್ಬರದಿಂದ ಬೆಳೆಯಬರಲು, ಗೊಬ್ಬರ ಹಾಕಾಂವಾ ॥೧॥

ಹೆಚ್ಚಿನ ಶಕ್ತಿಯ ಸಲ್ಫೆಟ್ ಗೊಬ್ಬರ, ತರತೇನಂದಾಂವಾ ।
ಮೆಚ್ಚುಗೆ ಪಡೆಯಲು ಹೆಚ್ಚಿಗೆ ಧಾನ್ಯ, ಬೆಳೆಯುವೆನಂದಂವಾ ॥
ಸಣ್ಣ ಭತ್ತ ವಾಸನೆ ಭತ್ತ, ಬಿತ್ತೋನಂದಂವಾ ।
ನುಣ್ಣಗೆ ಬೆಳೆಯುವ ಗಿಣಿಸಾಳಿ ಸಾಲು ಹಾಕೋನಂದಂವಾ ॥೨।

ಮ್ಯಾರಿಮೇಡ, ಕೆಂಪು ಭೂಮಿ ಬಿತ್ತೋನಂದಂವಾ ।
ಮೊದಲಿಗೆ ಬರುವ ದೊಡಿಗ್ಯಾನಬೀಜ. ಹಾಕೋನಂದಂವಾ ॥
ಮಿಕ್ಕಿದ ಬೆಳೆಯು, ಬೆಳೆಯುವಂತೆ ದುಡಿಯುವೆನಂದವಾ ।
ಒಕ್ಕಲುತನದ ಖಾತೆದವರ, ಮಾತುಕೇಳಾಂವಾ ॥೩॥

ಬಿತ್ತುವ ತತಿಗೆ ಭತ್ತದ, ಬೀಜ ಸಜ್ಜುಮಾಡಾಂವಾ ।
ರೋಹಿಣಿ ಮಳೆಗೆ ಕೂರಿಗೆಯನ್ನು, ಹೂಡಿಬಿಡುವಾಂವಾ ॥
ಎಡೆಯು ಹೊಡೆದು ಭತ್ತದ ಸಾಲು, ಮಾಡಿಬಿಡುವಾಂವಾ ।
ನೀರಿಗಾಗಿ ಗದ್ದೆಯ ಹಾಳಿ, ಒಡ್ಡುಹಾಕಾಂವಾ ॥೪॥

ನೀರಗುಂಟೆ ಹೊಡೆದ ಮ್ಯಾಲ, ಕಳೆಯ ತೆಗೆಸಾಂವಾ |
ಕಾಲುವೆಯಿಂದ ನೀರು ಕೊಟ್ಟು, ಪೈರು ಬೆಳೆಸಾಂವಾ ||
ಹುಲುಸಿನಿಂದ ಬೆಳೆದ ಪೈರು, ನೋಡಿ ಹಿಗ್ಗಾಂವಾ |
ಶಿಗೀಹುಣ್ಣಿವಿ ಹಬ್ಬವನ್ನು, ಉಬ್ಬಿಮಾಡಾಂವಾ ||೫||

ಭೂಮಿತಾಯಿಗೆ ನಮಿಸಿ, ತಾನು ಎಡೆಯ ಮಾಡಾಂವಾ |
ಪಾಂಡವರನ್ನು ಪೂಜೆ ಮಾಡಿ, ಚರಗಾ ಚೆಲ್ಲಾಂವಾ ||
ಬೆಳೆಯ ನೋಡಿ ಹರುಷಗೊಂಡು, ಹಾಡುಹೇಳಾಂವಾ |
ಭತ್ತವನ್ನು ಕೊಯ್ದುಹಾಕಿ, ಕಣವ ಮಾಡಾಂವಾ ||೬||

ಹಂತಿಯಕಟ್ಟಿ ರಾಶಿಯ ಮಾಡಿ, ಹಬ್ಬವ ಮಾಡಾಂವಾ |
ದೀನದಲಿತರ ಕರೆಸಿ ತಾನು, ದಾನಾ ಮಾಡಾಂವಾ ||
ಬಂಡಿಯ ಹೂಡಿ ರಾಶಿಹೇರಿ, ಕಣಜಾ ತುಂಬಾಂವಾ |
ಭತ್ತವ ಕುಟ್ಟಿಸಿ ಅಕ್ಕಿಯ ಮಾಡಿ, ಪೇಟೆಗೆ ಒಯ್ಯಾಂವಾ ||೭|

ಕಾಳು ಮಾರಿ ಹಣದ ರಾಶಿ, ಮನೆಗೆ ತರುವಾಂವಾ |
ಜಾತಿಯ ಎತ್ತು ಗೌಳೇರ ಕೋಣಾ, ಕೊಂಡುಕೊಳ್ಳಾಂವಾ||
ಶೀರಿ ಕುಬಸಾ ವಸ್ತ್ರಾ ಒಡವಿ, ತಂದು ಬಿಡುವಾಂವಾ |
ಬಸವರಾಜ ಅಂಗಡಿಯವರ, ಹಾಡುಹೇಳಾಂವಾ ||೮||

    

ಒಕ್ಕಲಿಲ್ಲದ ಊರು ಮಕ್ಕಳಿಲ್ಲದ ಮನೆಯು
ಲೆಕ್ಕವಿಲ್ಲದವನ ವ್ಯವಹಾರ ಇವುಮೂರು
ದುಖಃಕಾಣಯ್ಯ ಸರ್ವಜ್ಞ

# ಮೈಗಳ್ಳ ರೈತ

## ಲಾವಣಿ ಪದ

ಮುದುಕಾದರೇನಾತಿ ನಾ ಸಣ್ಣಾವಾ| ಕೆಲಸಿಲ್ದ ಆರಾಮ ಕುಂತ ಉಣ್ಣಾವಾ || ಕಾಮುಚೇಷ್ಟಾದ ಪದಗಳ ಅನ್ನಾವಾ | ನೇಮ ದ್ವೋಟಿ ಬ್ರೆಡ್‌ಭಾಜಿ ತಿನ್ನಾವಾ || ಕಾಮ ಕಷ್ಟಕ್ಕಂದರ ಕಾಲದೆಗಿಯಾವಾ| ಹೊಲಕ್ಹೊಗೂದು ಹೊಲಕ್ಹೊಗೂದಕ್ಕೆ ಒಲ್ಲೇ ಎನ್ನಾವಾ || ಕೆಲಸಿಲ್ಲ ಆರಾಮ ||೧||

ಅನುದಿನ ಉದಯದಿ ಚಹಾ ಕುಡಿಯಾವಾ | ಚಹಾದಂಗಡಿಗೆ ನಿತ್ಯದಲ್ಲಿ ನಡಿಯಾವಾ || ಮದವಿ ಹೆಂಡತೀನ ನ್ಯಾಯ ತಗದ ಬಡಿಯಾವಾ ! ಸೂಳಿ ಮನಿಯೊಳು ಪ್ರೀತಿಯಿಂದ ದುಡಿಯಾವಾ || ಸೂಳಿ ಮನಿಯ ಅಂಗಳ ಕಸಾ ಹೊಡಿಯಾವಾ | ನಿಜ ತತ್ವಕೆ ನಿಂದಿಸಿ ನುಡಿಯಾವಾ || ಕೆಲಸಿಲ್ಲ ಆರಾಮ ಕುಂ ||೨||

ದುಷ್ಟ ಜನರನ್ನ ಕೂಡಿಕೊಂಡ ಮೆರಿಯಾವಾ | ಸಾಧುಸಂತ ಸಜ್ಜನರನ್ನ ಜರಿಯಾವಾ || ಲಂಚದಾಶೇಕ ಖೊಟ್ಟಿ ಸಾಕ್ಷಿ ಹೇಳಾವಾ| ಶಿಂದಿ ಸರಾಯಿ ಸೇವನ ಮಾಡಿ ಬೀಳಾವಾ || ಬ್ಯಾಡಂದವನ ಕೈ ಹಿಡಿದು ಕೇಳಾವಾ | ಧಂಡ್ಯಾ ಕಟ್ಟಿಕ್ಕೊಂಡ ದರೂಡಿಗೇಳಾವಾ || ಕೆಲಸಿಲ್ಲ ಆರಾಮ ||೩||

ಮಂದಿಮ್ಯಾಲ ಒಕ್ಕಲತನಾ ಮಾಡಾವಾ | ತಾ ಕುಂತಲ್ಲೆ ಕಾರಭಾರ ನಡಸಾವಾ || ಆಜುಬಾಜು ಹೊಲದವರನ್ನ ನೋಡಾವಾ | ಹಾಲಗಾಳಿನ ಮೇವ ತುಡುಗ ಮಾಡಾವಾ || ಜರ ಸಿಕ್ಕರ ಸುಳ್ಳ ಹೇಳಿ ಓಡಾವಾ | ಖರೇ ಹೇಳಾವನ ಚಂಡ ಹಿಡಿದ ದೂಡಾವಾ ಕೆಲಸಿಲ್ಲ ಆರಾಮ ಕುಂತ ಉಣ್ಣಾವಾ ||೪||

# ದನಗಳ ಮಹತ್ವ

ಪ್ರೀತಿಯಿಂದ ಕೇಳಿರಿ ರೈತಬಾಂಧವರು ಕೂತ । ಮಹತ್ವದ ಮಾತ ರೈತನಿಗೆ ಮುತ್ತ । ರತ್ನಗಳು ವ್ಯರ್ಥ ಮೊದಲ ಬೇಕ ಎತ್ತ । ರತ್ನಗಳಿಗಿಂತ ಎತ್ತ ಬಹು ಮೇಲ । ಎತ್ತಿಲ್ಲದಿದ್ದರ ರೈತ ರೈತನ ಕಮತ ಬೆಳಿಯಲಿಲ್ಲ ಬಿತ್ತ । ಚಲೋ ಎರಡೆತ್ತ ಕಟ್ಟಿ ಬಹು ಸಿಸ್ತ ರೆಂಟೆ ಕುಂಟೆ । ಹತ್ತಿ ಹರಗರೆಪ್ಪಾ ಹೊಲ ||ಪಲ್ಲ||

ಮುಂದೆ ಬಿತ್ತುವಾಗ ಎತ್ತು ಬೇಕ । ಯಡಿಯ ಹೊಡಿಯು ವದಕ ಸರ್ವ ಕಾರ್ಯಕ । ಚಕ್ಕಡಿ ಹೊಡ್ಯಾಕ ರಾಶೀ ಮಾಡಾಕ । ಎತ್ತುಗಳು ಸೊಕ್ಕುನಾಂಗ ಮೇಸಿ । ಪಡಿಯಬೇಕ ಸತ್ವಲಾ । ಎತ್ತು ಎಮ್ಮಿ ಮತ್ತು ದನಕರಾ । ಶಗಣಿ ಗೊಬ್ಬರಾ ಎತ್ತಿನ ಮೂತ್ರಾ । ಗೊಬ್ಬರಾತಿ ಖಾರ ಹೊಲಕ ಹಾಕಿದರ ಬೆಳಿಯ ಅಬ್ಬರ । ಬೇಕಾದಷ್ಟ ಮಾಲ ತಿಳಿರೆಪ್ಪಾ ದನಗಳ ತತ್ವ । ಆಕಳ ಎತ್ತ ರಾಷ್ಟ್ರ ಸಂಪತ್ತ । ಬೆಳಿಸುವ ಮಹತ್ವ ಮೇಲಾಗಿರು ಸತ್ವ । ಧನಾ ಅದರರ್ಥ ಅರಿಯು ರೆಪ್ಪಾ ಮೂಲಾ । ದನದಿಂದ ಧನವನು ಗಳಿಸಿ । ಹೊಡಿಯರೆಪ್ಪಾ ಬೇಸಿ ಸೌಖ್ಯದಿಂದ ಕುಸಿ । ಹಿಂಗ ಪುರಮಾಸಿ ಶ್ರೀಯುತ ಎಲಿಗಾರ ಸಾಹೇಬರು ಬಹಳ ಸೋಸಿ ಹೇಳಿದಾರ ಮೊದಲಾದ । ಚಲೋ ಎಮ್ಮಿ ಆಕಳಗಳ ಕ್ಷೀರ । ಷ್ರುತಾ ಸ್ವೀಕಾರ ಮಾಡ್ರಿ । ಅತಿ ಸುಂದರ ಮುಖದಲಿ ಚಂದ್ರ । ಕಳಿ ಕಡಿಮಿಲ್ಲಾ ಗೋ ಕ್ಷೀರ । ಅಮೃತವೆಂದು ಪೂರಾ ಶೃತಿಯ ಶ್ಯಾಸ್ತ್ರರ ಅತಿ ನಿರ್ಧಾರ ।

○ ○ ○ ○ ○

ಹಳ್ಳದಾ ಹೊಲವಾಗಿ ಬೆಳ್ಳನ್ನ ಹೋರ್‍ಯಾಗಿ<br>
ಮೆಳ್ಳಗಣಿನಾ ಸೊಸಿಯು ಮನಿಯೊಳಗಿರಲು<br>
ಹೊನ್ನಿನಾ ಕುಳ್ಳಿ ಕುಳ್ಳಿ ತಾ ಸರ್ವಜ್ಞ

## ಒಕ್ಕಲತನ ಹಾಗೂ ಸಹಕಾರ

# ಲಾವಣಿ

ನಾಡದೇವಿ ನಿನಗ ಶರಣು ಮಾಡುವೆನು। ರೈತಜನರಿಗಿಂದು ಒಂದು ಹಾಡುವೆನು। ರೈತನಿಂದ ಜಗವಿದೆಲ್ಲ ನಡೆವುದನ್ನು। ರೈತ ಗೈಯ್ವ ಭೂಮೀ ಕರ್ಮಯೋಗವನು ||೧||

ಕಾಲಚಕ್ರ ತಿರುಗಿ ಹಿಂದುಸ್ತಾನದಾಗ। ನಾಲವತ್ತು ಕೋಟಿ ಜನಸಂಖ್ಯಾ ಈಗ। ಸಾಲೂದಿಲ್ಲ ಭೂಮಿ ಬೆಳೆದ ಧಾನ್ಯ ನಮಗ। ಏಳಬೇಕೊ। ರೈತ ಕೈಯ್ಯಮುಗಿವೆ ನಿನಗ ||೨||

ಒಕ್ಕಲತನವ ಬೆಳಿಸೋ ಬೇಗ ನೇಗಿಲಯೋಗಿ। ಟ್ರ್ಯಾಕ್ಟರ ಹೊಡೆದು ಭೂಮಿ ಹಸನ ಮಾಡಲಾಗಿ। ತಕ್ಕ ಕಾಂಪೋಸ್ಟ ಗೊಬ್ಬರ ಹಾಕಲಾಗಿ। ಲೆಕ್ಕವಿಲ್ಲದಷ್ಟು ಬೆಳೆ ಬರುವದಾಗಿ ||೪||

ಮಣ್ಣ ಬಂಗಾರ ಮಾಡುವಂಥ ಗೊಬ್ಬರವು। ಮಣ್ಣಿನಲ್ಲಿ ಬೆಳೆದ ಬೆಳೆಯ ಅಬ್ಬರವು। ಮಣ್ಣು ಬೆಳೆದರಿಲ್ಲ ಲೋಕದಲ್ಲಿ ಬರವು। ಮಣ್ಣಿನಲ್ಲಿರುವದು ಈ ಲೋಕದಿರವು ||೫||

ಗೊಬ್ಬರ ಗೊಬ್ಬರವೇ ಕಾಮಧೇನುವು। ಗೊಬ್ಬರ ಗೊಬ್ಬರವೇ ಕಲ್ಪತರುವು। ಗೊಬ್ಬರ ಗೊಬ್ಬರ ಬೇಡಿದಂಥ ವರವು। ಗೊಬ್ಬರ ಗೊಬ್ಬರ ಬೆಳ್ಳಿ ಬಂಗಾರವು ||೬||

ಆರಿಸಿ ತೆಗೆದ ಬೀಜವನ್ನು ಬಿತ್ತಬೇಕೋ। ಹೋರಿ ಬೀಜಕ ಬಿಟ್ಟು ಆಕಳು ಕಟ್ಟಬೇಕೋ। ಅಣ್ಣೀಗೇರಿ ಫಾರ್ಮದ ಗೋದಿ ಬಿತ್ತಬೇಕೋ। ಪೂರಾಪೂರಾ ಬೆಳೆಯ ಕಂಡು ಹಿಗ್ಗಬೇಕೋ ||೭||

ಭಾವೀ ತೋಡಿ ಸಬ್‌ಸೀಡಿಯ ಪಡೆಯಬೇಕೋ। ತ್ಯಾವದಾಗ ಕೋಯಮತ್ತೂರ ಕಬ್ಬು ಹಚ್ಚಬೇಕೋ। ಕಾವಿನಾಗ ಹೂಬಿಟ್ಟ ಬಳ್ಳಿ ನೋಡಬೇಕೋ। ಹೊಸಾ ಪದ್ಧತಿ ಆಲಿ ಒಲಿಕಟ್ಟಿಸಬೇಕು ||೮||

ಹೊಸರೀತಿ ಭೂಮಿ ಬದಕು ಮಾಡಿದಾಂಗ | ಹೊಸದಾಗಿ ಮಡದಿ ಮುಖನೋಡಿದಾಂಗ | ಹೊಸಮಾದರೀ ಪೈರು ಬೆಳದಾಂಗ | ಹೊಸದೊಂದು ಲಾಭ ನಮಗೆ ದೊರಕಿದಾಂಗ ||೯||

ಬೆಂಡೀ ಹೀರೀ ಚವಳಿಕಾಯಿ ಪಲ್ಲೆಗಳ | ದುಂಡಲಿಂಬಿ ಪೇರಲ ಬಾಳಿ ತೋಟಗಳ | ಕಂಡಾಂಗ ಬೆಳಿಸಿ ನಮ್ಮ ನಾಡ | ಮಂಡಲದಾಗ ಮೆರೆಯಿಲಿ ರೈತ ಮೇಲಾ ||೧೦||

ಬಾಳ ಬುದ್ಧಿವಂತ ಲಾರ್ಡ ಬಾಯಿಡ್ ಭಲಾ | ಹೇಳೀದನು ಭೂಮಿಯಲ್ಲಿ ಕೃಷೀವಲಾ | ನಾಳಗಿರಲಿ ರಾಜಕಾರಣ ಊಳೋ ನೆಲಾ | ಮೇಲೆ ಯಾವುದಿಲ್ಲ ಇದಕ ಶ್ರೇಷ್ಠಫಲ ||೧೧||

ತಂದೆ ತಾಯಿ ಲೋಕ ಬಂಧು ಬಳಗ ರೈತ | ಇಂದ್ರಚಂದ್ರ ರಂತೆ ನೀವು ಬೆಳಗುವಂಥ | ಹಿಂದೂ ಮುಸ್ಲೀಮರೊಂದುಗೂಡುವಂಥ | ಮುಂದೆ ಬರಲಿ ಕಾಲ ಕವಿತೆ ಹಾಡುವಂಥ ||೧೨||

ಆಳಿದು ಹೋಯ್ತು ಕಂಟ್ರೋಲಿನ ಕಾಲವೀಗ | ಉಳಿಯಲಿಲ್ಲೊ ಕಳ್ಳಪ್ಯಾಟೆ ಭೂಮಿಮ್ಯಾಗ | ತಿಳಿದು ನಡೆಯುಬೇಕೋ ಜನರು ಇನ್ನು ಮ್ಯಾಗ | ತಿಳಿಯಗೆಟ್ಟು ಹೋಗಬಾರ್ದು ಮನೆಬಂದಾಂಗ ||೧೩||

ಕಾಳಕಡಿ ಆಹಾರಧಾನ್ಯ ಬಿಳೆಯರೀಗ | ಹೋಳಗಿ ತುಪ್ಪದಲ್ಲಿ ಕೈಯ್ಯ ತೊಳೆಯರೀಗ | ತಾಳಗೆಟ್ಟು ತಿನ್ನಬ್ಯಾಡ್ರಿ ವ್ಯಾಪಾರದಾಗ | ಕೀಳುತನ ಬಿಡ್ರಿ ಹಿಂದುಸ್ತಾನದಾಗ ||೧೪||

---

ಬೆಕ್ಕುಮನಿಯೊಳು ಲೇಸು ಮುಕ್ಕುಕಲ್ಲಿಗೆ ಲೇಸು
ನೆಕ್ಕು ನಗಿಸುವ ನುಡಿಲೇಸು ಊರಿಂಗೆ ಒಕ್ಕಲಿಗ
ಲೇಸು ಸರ್ವಜ್ಞ

ಅಕ್ಕಿಯನು ಉಂಬುವನು ಹಕ್ಕಿಯಂತಾಗುವನು
ಶಿಕ್ಕುರೋಗದಲಿ ರೊಕ್ಕವ ವೈದ್ಯನಿಗಿಕ್ಕುತ್ತಲಿರುವ
ಸರ್ವಜ್ಞ

# ನಡಿ ಹೋಗೂನು ಮಾನೇದ ಹೊಲಕ!

ಚಲ ರಣಾತ ಸಜನಾ ದೂರ ಅಂಬೆವನಾತ ಜಾವುಯಾ ದೂರ ಎಂಬಂತೆ

ನಡಿ ಹೋಗೂನು ಮಾನೇದ ಹೊಲಕ |
ಗಡ ಕರಕಿಯು ತಗೆದು ವಗಿಲಾಕ ||ಪ||

ಗಾಡಿ ಗಾಡಿ ಗೊಬ್ರಾ ಹೇರಬೇಕ |
ಕಡದು ಗುಂಪಿ ಹೊಲಾ ತುಂಬಬೇಕ ||
ಮಾಡಿ ಕರಿ ಹೊಲ ರಂಟೆ ಹೊಡಿಬೇಕ |
ಮೂಡಲ ಹೋರಿ ಹೂಡಿ ಎಳಿಸಬೇಕ ||೧||

ಬೇಡಿ ಶಿವನ ಉಡಿಯು ಕಟ್ಟಬೇಕ |
ಜೋಡ ಕೂರ್ಗಿ ಹೂಡಿ ಬಿತ್ತಬೇಕ ||
ಸಡಗರದಿಂದ ಹಾಡ ಹೇಳಬೇಕ |
ಚಂದಾಗಿ ಕೈಗಾಳ ಹಾಕಬೇಕ ||೨||

ಜಡಿದು ಮಳೆಯು ಪೈರು ಬೆಳಿಬೇಕ |
ಎಡೆಯ ಹೊಡೆದು ಸಾಲು ಮಾಡಬೇಕ ||
ಗಡ ಪೈರು ನಿಲುವು ನಿಲ್ಲುವುದಕ್ಕ |
ವಡನೆ ಕಳೆಯ ತೆಗೆದು ಚಲ್ಲಬೇಕ ||೩||

ಹೊಡಿ ಹಿರಿದ ಬೆಳೆಯ ನೋಡಬೇಕ |
ಹೆಡಿಗಿ ಮಾಡಿ ಹೊಲಕ ಹೋಗಬೇಕ ||
ಮಾಡಿ ಎಡೆಯ ಚರಗ ಚೆಲ್ಲಬೇಕ |
ಹಾಡಿ ಎಲ್ಲಾರು ಕೂಡಿ ಉಣ್ಣಬೇಕ ||೪||

ನೋಡುತೆನಿ ಬೆಳಸಿ ಆಗದುಕ |
ಹೊಡಿಯಾಗ ಮುತ್ತು ಕಾಣಬೇಕ ||
ಮೂಡುಗಾಳಿ ಜೋರುಬೀಸಬೇಕ |
ನಾಡ ಪೈರು ಮಾಗಿ ನಿಲ್ಲಬೇಕ ||೫||

ಗಡಕ್ಕೊಯ್ದು ಗೂಡು ಬಡಿಬೇಕ !
ಮಾಡುಸುಗ್ಗಿಯ ಹುಗ್ಗಿ ಹೊಡಿಲಾಕ ||
ಮಾಡಿ ಕಣಾ ತೆನಿಯ ತುಳ್ಸಬೇಕ |
ಹಾಡ ಹೇಳಿ ರಾಶಿ ಮಾಡಬೇಕ ||೬||

ನೀಡಜೋಗಿ ಜಂಗಮರು ತಣಿಬೇಕ |
ಗಾಡಿ ಹೂಡಿ ರಾಶಿಯ ಹೇರಬೇಕ ||
ದುಡಿದು ಮಗನ ಮದವಿ ಮಾಡಬೇಕ |
ಅಡಿಗಿ ಮಾಡಿ ಸೊಸೆಯು ನೀಡಬೇಕ ||೭||



## ಮಣ್ಣಿನ ಮಹತ್ವ

ಕಂದ ರಾಗ—ಶಂಕರಾಭರಣ

ಮಣ್ಣೇ ಜಗದಾಧಾರವು |
ಮಣ್ಣೇ ತಾ ಜಗದಿ ಮುಖ್ಯ ಜೀವನದಿರುವು ||
ಮಣ್ಣೇ ಜೀವಾಹಾರವು |
ಮಣ್ಣೇ ಸಿರಿ ಸಗ್ಗ ರೈತ ಜನ ಸಂಪದವು ||
ಮಣ್ಣು ಮಾನವ ಕಾಮಧೇನುವು |
ಮಣ್ಣು ಲೋಕದ ನೈಜ ಪ್ರಾಣವು ರೈತರಿಹಪರವು ||೧||

ಮಣ್ಣಿನಲ್ಲಿದೇ ರೈತ ಭಾಗ್ಯವು |
ಮಣ್ಣಿನಲ್ಲಿದೇ ರೈತ ಭೋಗ್ಯವು ||
ಮಣ್ಣು ಸೇವೆಯು ಗೈವ ರೈತರೆ ವಿಶ್ವರಕ್ಷರು ||೨||

ಮಣ್ಣು ಬಿಡದಲೆ ಕಟ್ಟಿ ಒಡ್ಡನು |
ಹೊನ್ನು ಮಳೆಗರೆ ರೈತ ನೀನೇ ಲೋಕಪಾಲಕನು ||೩||

# ನಮ್ಮ ನಾಡಿನ ಲಾವಣಿ

ಧನ್ಯ ಧನ್ಯ ಸಿರಿಗನ್ನಡ ದೇವಿಯೇ ಸ್ಮರಣೆ ಮಾಳ್ಪೆ ಅನುದಿನ। ವರ ಕರುಣದಿ ತೋರಮ್ಮ ಚರಣ ಭೋ ಕನ್ನಡ ಮಾತೆ ಬಣ್ಣಿಸಲಾರೆನು ನಿನ್ನ ಮಹಾ ಮಾನ್ಯ ಮೂರ್ತಿಗಳು ನಿನ್ನಲ್ಲಿ ಆದರು ಜನನ। ರನ್ನ ಚಿನ್ನ ಪೂರಿತ ಪೂರ್ಣ। ವಿಶಾಲದ ವದನ ಬನಸಿರಿಯು ಬನಸಿರಿಯು ಭರಿತ ಜನಪಾಲಿನಿ ಜನನಿ ಮಾಡಲಾರೆನು ವರಣವರಕರುಣದಿ ತೋರಮ್ಮ ಚರಣ ||೧||

ಸೌಭಾಗ್ಯವತಿ ನೀ ಸರ್ವಮಂಗಲೇ। ದೇಹ ಬಹು ವಿಸ್ತೀರ್ಣ ಶಾಂತೋದಕ ತುಂಬಿದ ನಯನ। ಮಹಾ ತೀರ್ಥ ಗೋದಾವರಿಯಿಂದ ಕಾವೇರಿಯ ತನಕ। ಅರಬಿಯ ಸಮುದ್ರದಿಂದ ಬಂಗಾಲದ ಉಪಸಾಗರಕ। ಮಿತಿ ಪರಿಣತೆಯಿಂದೆ ಪ್ರಕಾಶ ಬೀರಿದೆ ಜಗಕ। ಅಸಂಖ್ಯಾತ ಅಸಂಖ್ಯಾತ ವೀರ ನರಕೇಸರಿಗಳನು ಮಾಡಿದೆಮ್ಮ ಉದ್ಧರಣ ವರ ಕರುಣದಿ ತೋರಮ್ಮ ಚರಣ ||೨||

ಪರಮೇಶ್ವರಿ ನಿನ್ನ ಪವಿತ್ರ ಗರ್ಭದಿ ಉದಿಸಿ ಬೆಳೆದ ವೀರರನ ಪರಿಪಾಲಿಸಿದೆಮ್ಮ ಸಂಪೂರ್ಣ ಚಾಲುಕ್ಯ ಪುಲಿಕೇಶಿಯು ವೀರ ಹುಕ್ಕ ಬುಕ್ಕರು। ರಾಷ್ಟ್ರಕೂಟರು ರಟ್ಟಮತ ಉತ್ಪಾದಕರು ದೇವಗಿರಿಯ ಯಾದವರು ಕದಂಬ ಹೊಯ್ಸಳರು। ಬಹು ಭಾಗ್ಯ ಶಾಲಿ ಮೈಸೂರ ದೊರೆ। ವಿಕ್ರಮಾದಿತ್ಯ ನರವರನ ಕೃಪೆಯಿಂದ ಕಾಪಾಡಿದಿ ನೀನ

ಪೃಥ್ವಿಯಲ್ಲಿ ಸ್ತ್ರೀರತ್ನವೆನಿಪರು ಬೆಳವಡೀಯ ಮಲ್ಲಮ್ಮ ಮಹಾ ವೀರ ರಾಣಿ ಚೆನ್ನಮ್ಮ। ಭದ್ರವಾದ ಬಲಶಾಲಿಯೆನಿಸಿದಳು ಭಾಗ್ಯವಂತಿ

ರುದ್ರಮ್ಮ ವರಕೀರ್ತಿ ಛತ್ರ ನೆರಳಲ್ಲಿ ಮೆರೆದರು ವೀರಾಂಗನೆಯರ ಧರ್ಮ । ದಯಾ ಧರ್ಮ ರೂಪಿಗಳು ಕನ್ನಡ ನಾಡೊಳು ತೋರ್ಯಾರು ಮಹಿಮ । ಇಂಥಾ ಮಹಿಮೆಯುಳ್ಳ ಮಹಾರಾಣಿ ರತ್ನಗಳ ಮಾಲಿ ಧರಿಸಿದೆಮ್ಮ ನೀನುವರ ಕರುಣದಿ ತೋರಮ್ಮ ಚರಣ ||೪||

ಮುಖ್ಯವಾಗಿ ಅಕ್ಕರತೆಲಿ ಹಡದಮ್ಮಾ ಅಕ್ಕ ಮಹಾದೇವಿಯ ರನ್ನ ನಿಂಬೆಕ್ಕಗಾದಿ ಪ್ರಸನ್ನ । ಶ್ರೀ ರಾಮಾನುಜಾಚಾರ್ಯರು ವಿದ್ಯಾರು ಸುಜ್ಞಾನಿ ಮಣಿಗಳೆಂದು ಕೀರ್ತಿಯನ್ನು ಪಡೆದವರು ಬಸುವಾದಿ ಪ್ರಮಥರು ವೀರಶೈವ ಧರ್ಮ ಸ್ಥಾಪಕರು । ಮಧ್ವಾಚಾರ್ಯರು ಮೊದಲಾದ ಅನೇಕ ಸತ್ಪುರುಷರು ವರಕವಿಗಳು ವರಕವಿಗಳು ನಿಜ ಗುಣಾರಾಧ್ಯರು ಮುಕ್ತಿಯ ಮಾರ್ಗ ತೋರ್ಪ ಮಹಾತ್ಮರನ ನಿನ್ನ ಒಡಲೊಳಗಿರಿಸಿದಿ ಪೂರ್ಣ ||೫||

ನವರಸಾ ನೀಡಿ ಚೈತನ್ಯ ಹುಟ್ಟಿಸುವ ಕವಿ ಶಿಖಾಮಣಿ ರನ್ನ ವಿರುಪಾಕ್ಷ ವಿಬುಧ ಜನರತ್ನ ಸಂಪವಾದ ಸೊಗಸಾದ ಕವಿತೆಯು ಪಂಪ ರಾಘವಾಂಕರದು ಶಭರ ಶಂಕರ ರಾಜಶೇಖರ ದೇವಾವತಾರಿ ಕರೆಂದು ಸದಾ ಸ್ತೋಮ ಹೊಗಳುವದು ಜಗದೋದ್ಧಾರಕರೆಂದು ಸದ್ಬೋಧ ಶಾಂತಿ ಸದ್ಧರ್ಮಗಾಮಿಗಳು ಜಗದೊಳು ಬೆಳೆದಾರು ಪೂರ್ಣ ವರ ಕರುಣದಿ ತೋರಮ್ಮ ಚರಣ ||೬||

ಜಕ್ಕಣಾಚಾರ್ಯರು ಸ್ಥಾಪನಗೊಳಿಸಿದ ದಿವ್ಯ ದೇವಾಲಯ ಗಳನ ನೋಡಲು ಅತಿ ಮನೋಹರ ರಸಭರಿತ ರುಚಿಕರದ ಹಣ್ಣು ಕೊಡುವ ವೃಕ್ಷಗಳು । ಅಂಜೂರಿ ದ್ರಾಕ್ಷ ಅನಾನಸ ಶೇಬು ಸಂತ್ರಿಗಳು । ಫಲಸು ಮಾವು ಪೇರಲ ಕದಳಿ ಬನಗಳು ಬೆಳೆದವು ಚಿನ್ನ ಗಗನ ಮಲ್ಲಿಗೆ ಶ್ರೀಗಂಧದ ಗಿಡ ಗುಲಾಬಿ ಹೂವಿನ ಗಮ್ಮ ಅನಂತ

ಜೀವಿ ಮಾನವಾ ಪಶುಪಕ್ಷಿಗಳು ಸ್ವೀಕರಿಸಿ ಸ್ವೀಕರಿಸಿ ಶಾಂತಿ ಅಂಬುಧಿ
ಯಲಿ ಈಸುವ ನಿನ್ನ ಕೃಪಾಬಲವನ್ನ ಅಲ್ಪಮತಿಯು ಪೊಗಳಲಿನ್ನೇನ
ವರ ಕರುಣದಿ ತೋರಮ್ಮ ಚರಣ ||೭||

ಶ್ರಿಂಗಾರ ಸೊಬಗು ಮಂಗಲ ಶಿಖರ ಮಸ್ತಕದಿ ಮಾಡಿ
ಧಾರಣ ಬಲಗೊಳಿಸಿದಿ ಹಿಂದುಸ್ತಾನ ನಿನ್ನ ಮಹಿಮಾ ವರ್ಣಿಸುವದು
ಆದಿಶೇಷನಿಂದ ಸಹಿತ ಅಸಾಧ್ಯ ಮಾತವಿದು ಆಗಲಾರದು ಪೂರ್ತ ನಾ
ಮೊದಲೆ ಅಲ್ಪಮತಿ ಆದಿತ್ಥಂಗ ಸಮಾಪ್ತ ಗತವೈಭವ ಗತವೈಭವ
ಮರಳಿ ಸಿರಿಯು ಒಡಗಲಿ ಎಂದು ಬೇಡುವೆನು ವರಗಳನ ವರ ಕರು
ಣದಿ ತೋರಮ್ಮ ಚರಣ ||೮||

*

## “ ನೀರು ”

ಕಂದ—ಭೈರವಿ

ನೀರಿನಲ್ಲಿದೇ ಜಗದ ಜೀವನ । ನೀರಿನಲ್ಲಿದೇ ಬೆಳೆಯ ಜೀವನ ॥
ನೀರಿನಲ್ಲಿದೇ ಪ್ರಾಣಿಕೋಟಿಯು ಜನ್ಮಧಾರಣವು ।
ನೀರಿನಿಂದಲೇ ತೃಪ್ತಿ ಲೋಕದ ॥
ನೀರಿನಿಂದಲೇ ಶಾಂತಿ ದೇಹದ ||೧||
ನೀರು ಪ್ರಳಯಾಗ್ನಿಯನು । ನೊಂದಿಸುವಂಥ ಸಾಧನವು ॥
ನೀರು ಆಟಂಬಾಂಬು ಶಕ್ತಿಯ । ಕ್ರೂರತನವಡಗಿಸುವದರಿಂ ॥
ನೀರ ದಾರಿಯ ಕಟ್ಟಿ । ಪಡೆಯಿರಿ ನಿಜ ಸುಖವ ಜಗದಿ ||೨||
ನೀರು ತೀರ್ಥ ಕ್ಷೇತ್ರಪಾವನ । ನೀರು ದೇವರ ತೃಪ್ತಿತರ್ಪಣ ॥
ನೀರು ಪಾದ್ಯಾಚಮನ । ಪೂಜಾ ವಿಧಿಯ ಸಾಮನವು ॥
ನೀರು ಬಿಡದಲೆ ಕಟ್ಟೆ ಒಡ್ಡನು । ನೀರಿನಿಂದಲೆ ಗಳಿಸಿದುಡ್ಡನು ॥
ನೀರಿಗಾಗಲಿ ಬ್ಯಾಂಕು । ನಿಮ್ಮಯ ಭೂಮಿ ಸುರವನವು ||೩||

# ಹೆಚ್ಚು ಆಹಾರ ಧಾನ್ಯ ಬೆಳೆಯುವ ಬಗ್ಗೆ ಲಾವಣಿ ಪದ್ಯ

ರಚಿಸಿದವರು— **ಶ್ರೀ ಬಾಳಪ್ಪ ಹುಕ್ಕೇರಿ, ಮುರಗೋಡ.**
(ಅಗ್ರಿಕಲ್ಚರಲ್ ಅಸಿಸ್ಟಂಟ) ಪ್ರಚಾರಶಾಖೆ, ಧಾರವಾಡ ಡಿವ್ಹಿಜನ್.

ಚಿಂತ್ಯಾಕ ಮಾಡತಿರೇಳ್ ಬಿತ್ರಿ ಲಗು ಜೋಳ್ | ಗೋದಿ ಒಳನಿವಳ | ಕಾಳ ಇಲ್ಲದಕ ಗೋಳ್ ಆತಿ ಜಗವೆಲ್ಲಾ || ಜೋಳಾ ಗೋದಿಯಿಂದ ಶಡಗರಾ | ಇಲ್ಲ ನಮಗ ಬರಾ ಹೌದಲ್ಲೋ ವಿಚಾರ | ಮಾಡ್ರಿ ಹಿರಿಯರಾ | ಸೌಂಸೆ ಎನಿಲ್ಲಾ || ಜೋಳಾ ಬಿತ್ತದಿದ್ರ ರೈತನ ಗೋಳ್ | ಎತ್ತಮ್ಮಿ ಆಕಳಗಳ್ ಆಗುವು ತಳಮುಳ್ | ಅಲ್ಲಿಂದ ಮನಿ ಹಾಳ | ಕಾಳ ಕತ್ತಲಾ || ಜೋಳ ಇಲ್ಲದಕ ಕಡುತತಿ | ಹೊಟ್ಟೆ ಚಾಹಾದ ಅಂಗಡಿಗೆ ಹೊಂಟಿ || ಬಾಳ್ವೆ ಮುರಾಬಟ್ಟೆ | ಮಾಡಿದಿ ಹದಬಟ್ಟೆ ಅಂತಾರ್ರಿ ಹಿರಿಯರೆಲ್ಲರಾ ||೧||

ಬ್ಯಾಸರಾ ಮಾಡಬಾಡ್ರಿ ಜೋಳಾ ಬಿತ್ತುದಕ | ಹೊಟ್ಟೆ ಕಣಕಿ ಚೊಕ್ಕ | ದನಗಳ ಮೇಸುವಕ | ಅದರಿಂದಾಗೂವದು ಸುಖ | ಚಿಂತ್ರೀ ಇಲ್ಲರಿ ಆಮ್ಯಾಲಾ ಶೇತಕಿ ಸುಧಾರಿಣೀಕ ಸಾಹಾಯ ಮಾಡತಾರ | ಸರಕಾರದವರ ಪಡಜಾಗಾ ಬೇಕಾದ್ರ ಹೇಳರಿ | ಇನ್ನವಾಲ್ಯಾ ಮಾವಿನ ಅಗಿ ಹಚ್ಚಾಕ | ಕಾಳಜಿಯಿಂದ ಸೇತಕಿ ಸಾಹೇಬರು ಹಣಾಕೊಡಸುರು | ಹಾಕಬ್ಯಾಡ್ರಿ ಉಸಿರು ಹೊಡಿರಿ ರೊಟ್ಟೆ ಮುಸರು | ಎದ್ದು ಪ್ರಾತಃಕಾಲಾ ||೨||

ಜೋಳಾ ಇಲ್ಲದಿದ್ರ ಬೀಗರು ಬರೋಣಲ್ಲಾ | ಕಟ್ಟಾ ತೆಂತಯಲ್ಲಾ | ಹತ್ತಿ ಬಿತ್ತೂದಿದ್ರ ಬಾಳ್ ನಿಮ್ಮ ಪ್ರೀತಿ ಬಿತ್ರಿ ಜಯಧಾರ | ಉದ್ದ

ಎಳಿದಾರ ಲಕ್ಷ್ಮಿ ಹತ್ತಿ ನಿವಳ ಮಾಡಬ್ಯಾಡ ಸುಸ್ತಿ । ಭಿತ್ರಿ ಈ ಹತ್ತಿ ನೀವು ಎಲ್ಲಾ ॥ ಹದ ನೋಡಿ ಬಿತ್ರೋ ತಮ್ಮಾ ದೌಡ । ಬಾಡಗಿ ಹೊಡಿಬ್ಯಾಡ । ಆದರಿಂದಾದೀತ ಕೇಡ । ಮಾತ ಮರಿ ವ್ಯಾಡ । ಗಳಿಸಿ ವಿಯೊ ರೊಕ್ಕ ಗೋದಿಯಿಂದ ನೀವಾ ॥೩॥

ಗುಳಗಿ ಸಜ್ಜಕ ಶಾಂವಿಗಿ ಊಟ ಪಕ್ಕಾ ಬೀಗರಗೀ ಒಳೇ ಠೀಕ। ತಿಥಿ ಮತಿಗ ಒಳೆ ಜುಳುಕ । ಲಗ್ನವಳೆ ಖಡಕ । ಜ್ಯಾತ್ರಿ ಆಗತಾವ ಜುಮರಾ ಗೋದಿ ಉಂಡ ಮಾಡತಾರ । ಯುದ್ಧ ಅಂತ ಶಕ್ತಿ । ಇದ ರಾಗ ಅಂತ ನೀವು ತಿಳಿದ ಬಿತ್ರಿ ಲಗು ಗೋದಿ । ಬಿತ್ತದಿದ್ರ ಆದಿ ಅನಾದಿ ॥೪॥

ತಿಳಿದವರಿಗೆ ಹೇಳುವದೇನ ಇನ್ । ಮಾಡಬ್ಯಾಡ್ರಿ ಅನುಮಾನ ಭತ್ತದಿಂದ ಅನ್ ದುಡಿದಂತೆ ಭಗವಾನ್ ಕೊಡುವ ನಿಮ್ಮ ತಕ್ಕಾ । ವಿನಯದಿಂದ ಹೇಳಿದ ಮಾತ । ಬಿಡಬ್ಯಾಡ್ರಿ ಮರ್ತ ಆಗುದುವೆರ್ಥ ಆದರಿಂದ ಅನರ್ಥ ಆಗೂದೆಲ್ಲ ಗುರ್ತ । ಹೇಳತೆನಿ ತರ್ಕ ಕೇಳರಿ ಎಲ್ಲಾ

ಖಾಲಿಜಾಗಾ ಇರ್ತಾವ, । ಹಿತ್ತಲದಾಗ ಬೀಳಗೆಡ್ಸಬ್ಯಾಡ್ರಿ ಆ ಜಾಗಾ ಈಗ ಖಾಲಿಜಾಗಾ ಇರತಾವ । ಹೊಲದಾಗ ಬೀಳಗೆಡ್ಸಬ್ಯಾಡ್ರಿ ಈಗ ರೈತರಿಗೆ ಕೊಟ್ಟ ಗಳೆ ಹೊಡಿಸಿರಿ । ಆಹಾರ ಧಾನ್ಯ ಹೆಚ್ಚು ಬೆಳಿಸಿರಿ ॥೬॥

ಕನ್ನಡನಾಡಿಗೆ ಶ್ರೀಂಗಾರ । ಧಾರವಾಡ ಜಿಲ್ಹಾ ಭಂಗಾರಾ । ದನಧಾನ್ಯ ಬೆಳೆಯತಾವರಿ ನಿವಳ । ಅಮೃತ ಮಾಲ ಆಕಳಗಳ ಬಳಗ ಹೋರಿಗಳ ತಳಿ ಬೆಳೆದಿತ ದಳಿ ಇದರಿಂದ ಪಿಳಗಿ ಶಗಣಿಯಿಂದ ಗೊಬ್ಬರ ಇದರಿಂದ ಅಬ್ಬರಾ ಕುಳ್ಳ ಹಚ್ಚಿ ಮಾಡಬೇಡಿರಿ ಕೇಡಾ ॥೭॥



# ನೇಗಿಲ ಯೋಗಿ

ರಾಗ—ಪಹಾಡಿ ಚಾಲ—ಅಸೇಪತಿ ತಾಲ—ಕವಾಲಿ

ಇದೇ ಸದಾ ಕರ್ಮದ ನಿಜ ಗೀತಾ ।
ಮಹಾ ಬಲಶಾಲಿ ನೀನೆ ರೈತಾ ॥
ದುಡಿದು ನೀ ಕೊಡುವೆ ಅನ್ನದಾತಾ ।
ಅಖಿಲ ಜೀವನವ ಸಲವುವಂತಾ ॥

ಮಹಾದಯಾ ಭರಿತ ಸ್ವಾರ್ಥರಹಿತಾ ।
ಪಡುವೆ ಕಷ್ಟವನು ಭೂಮಿಭಕ್ತಾ ॥
ಹತ್ತಿಯು ಬಿತ್ತಿ ಬೆಳೆದ ವೀರಾ ।
ಬಟ್ಟೆ ನಿನಗಿಲ್ಲ ಮಹೋದಾರಾ ॥
ಸತ್ಯ ನಿನ್ನದು ಪರ ಉಪಕಾರಾ ।
ನಿನ್ನದೇ ನಿಜ ಜನ ಸಹಕಾರಾ ॥೧॥

ಜಗದ ಜೀವರ ಕೋಟಿಯ ಭಾರಾ ।
ನಿನ್ನ ಮೇಲಿರುವದು ಸಂಸಾರಾ ॥
ಕೊಡದೆ ನೀ ನಡಿಯದು ಸರಕಾರಾ ।
ಜನತೆಯು ಅನ್ನದಾತಾ ನೀನೆ ॥
ನೇಗಿಲಯೋಗಿ ಜಗದ ನೇತಾ ।
ನಿತ್ಯ ನಿಷ್ಕಾಮ ಕರ್ಮನಿರತಾ ॥
ನಡೆ ನಿನ್ನದು ಭಗವದ್ಗೀತಾ ।
ನುಡಿದನುಡಿ ಸತ್ಯ ಸತ್ಯ ಭಾತಾ ॥
ಸದಾ ಶ್ರಮಜೀವಿ ನೀನೇ ಶಾಂತಾ ।
ರೈತನೇ ಲೋಕಮಾನ್ಯ ತ್ರಾತಾ ॥೨॥

ಯದೋಪದ ತತ್ವ ವಿಶಾರದನು ।
ಮಹಾತ್ಮಾ ಗಾಂಧಿಗೆ ಪ್ರಶವನು ॥
ಮಾಡಿದನು ಮಹಾತ್ಮಾನೆಂದರೇನು ।
ಗಾಂಧಿ ಉತ್ತರವ ಕೊಟ್ಟ ತಾನು ॥
ರೈತಗೆ ಜನರಿಟ್ಟಿಹ ಹೆಸರು ।
ಒಕ್ಕಲಿಗ ಮಹಾತ್ಮನೆನ್ನುತಿಹರು ॥
ಒಕ್ಕಲಿಗ ನಾನು ಜನರು ।
ಮಹಾತ್ಮಾ ಎಂದು ಕರೆಯುತಿಹರು ॥೩॥

## ಬಡತನ

ಚಾಲ— ಎಕದಿಲ್ಲ ಕೆಟಕಡೆ

ಬಡತನವೇ ದೇಶದಿ ಮೈದೋರಿದೆ ।
ಬಾಳು ಕೀಳಾಗಿದೆ । ಏಳು ಬೀಳಾಗಿದೆ ॥ಪ॥

ಮಿತಿ ಇಲ್ಲದ ಆಶೆಯು । ಮೂಡುತಿದೆ ॥
ಮತಿ ಮುಂದಾಗಿದೆ । ಕೃತಿ ಕುಂದಾಗಿದೆ ॥
ದುಃಸ್ವಾರ್ಥವು । ಜಗವಾ ತಣಿಸುತಿದೆ ॥
ಪರಹಿಂಸೆಯು । ಕೃತಿಯಲಿ ಬಂದಿಹುದು ॥
ಅನೀತಿಯ । ಜಗದಲಿ ಬೆಳೆಯುತಿದೆ ॥
ನುಡಿ ಮುಂದಾಗಿದೆ । ನಡೆ ಹಿಂದಾಗಿದೆ ॥೧॥

ಬೇಸಾಯದಿ ಜನರು । ನಡೆಗೆಡುತಾ ॥
ಆಹಾರಕೊರ್ತೆ ಕೈ । ಬೀಸುತಾ ॥
ಅನ್ಯಾಯದಿ ಜೀವನ । ಸಾಗುತಿದೆ ॥
ಸುಖ ಬೇಕಾಗಿದೆ । ದುಡಿತಬೇಡಾಗಿದೆ ॥೨॥

ನಿಜಗಾಂಧಿ ತತ್ವ । ಭೋಧಾಮೃತವು ॥
ಜೀವಲೋಕವ । ಜಾಗ್ರತಿಗೊಳಿಸುವದು ॥
ಇನಿತಾದರೂ । ಸಂಕಟ ಹರಿಯುತಿದೆ ॥
ನೀತಿ ಕುತ್ತಾಗಿದೆ । ಮಾತು ಮುತ್ತಾಗಿದೆ ॥೩॥

# ಬಡತನವ ದೂಡು

ಚಾಲ— ಹೀರಾತಸವತ

ಭೂ ಸೇವೆ ಮಾಡು ಮಾಡು | ಹೊಸ ಒಡ್ಡು ಹಾಕಿ ನೋಡು ||
ಬಡತನವ ದೂಡು ದೂಡು | ಸಂಪದವ ಕೂಡು ಕೂಡು ||ಪಲ್ಲ||

ಇಳಿಜಾರ ಕಟ್ಟಿ ನೀರಾ | ಹೊಲಕುಣಿಸು ರೈತ ವೀರಾ ||
ಹೊಲ ಬೆಳೆದು ಋಣದ ಭಾರಾ | ತೊಲಗುವದು ಸಶ್ಯಸಾರಾ ||೧||
ಮಳೆಗಾಲದಲ್ಲವಾಗಿ | ನಿಲದಂತೆ ಹರಿದು ಹೋಗಿ ||
ಹೊಲ ನೀರು ಕುಡಿಯದಾಗಿ | ಬೆಳೆ ಬರದು ರೈತ ಭೋಗಿ ||
ತಿಳಿ ಮಣ್ಣು ತೇಲದಂತೆ | ನೆಲ ನೀರು ಕುಡಿಯುವಂತೆ ||
ಬೆಳೆ ಮುಗಿಲು ಮುಟ್ಟುವಂತ | ಹೊಲ ಕಲ್ಪವೃಕ್ಷ ಮಾಡು ||೨||

ಹಳೆ ಒಡ್ಡು ಹೊಳಲಗಟ್ಟಿ | ತಿಳಿಗೆಟ್ಟು ಹಾಕಿ ಕೆಟ್ಟಿ ||
ಬಿಡು ಹಳೆಯ ಮೂಡ ಬಟ್ಟಿ | ಅದರಿಂದ ಹಾನಿಗಟ್ಟಿ ||
ಕೃಮಭೂಮಿ ಹಸಿಯ ಹಿಡಿವ | ಶ್ರಮವೆರ್ಥವಾಗದಿರುವ ||
ಸಮಪಾತಳ ಭೂಸಂಪದವ | ಭೂ ಸಂರಂಕ್ಷಣೆಯ ಖಾತೆಗೆಶವ ||೩||

§ † § †§† † §

ಜೋಳವನು ತಿಂಬುವನು ತೋಳದಂತಾಗುವನು,
ಬೇಳೆ, ಬೆಲ್ಲಗಳನುಂಬುವನು ಬಹುಕಾಲ
ಬಾಳನೆಂದರಿಗೂ ಸರ್ವಜ್ಞ.

ನವಣೆಯನು ತಿಂಬುವನು, ಹವಣಾಗಿ ಇರುತಿಹನು,
ಭವಣೆಗಳಿಗವನು ಒಳಬೀಳದೀ ಮಾತು,
ಕಿವಣೆಯಲ್ಲಿಂದ ಸರ್ವಜ್ಞ.

# ಎತ್ತು

ಚಾಲ— ಜೋ ಜೋ ನಂದನ ಜೋ



ಬಾ ಬಾ ಬಾ ಬಸವಾ | ಬಾ ಬಸವಾ ||
ಗೋಬಸವಾ | ಭಾಗ್ಯದಾ ಬಸವಾ ||ಪ||

ಭೂಮಿ ಬಾಳಿನ ಬಸವಾ | ಭುವನ ಜೀವನನೀ ಬಸವಾ ||
ರೆಂಟೆಯಲಿ ಹೆಂಟೆಯಲಿ | ಹೊನ್ನ ಬೆಳೆ ತರುವಾ ||೧||

ಶಗಣಿಯ ಗೊಬ್ಬರದಿ ಜಗದಿ | ಸೊಗವನು ನಿರ್ಮಿಸುವಾ ||
ಭಕ್ತಿಯಲಿ ಶಕ್ತಿಯಲಿ | ಸೇವೆ ಸಲ್ಲಿಸುವಾ ||೨||

ಆಧಾರ ನಾ ಬಸವಾ | ಉಸುರಿನ ಸಂಚಾರನೀ ಬಸವಾ ||
ಜಗ ಹಸಿವಾ ಜವ ಕಳೆವಾ | ಜೀವ ಕಳೆ ಬಸವಾ ||೩||

ಎತ್ತು ರಾಷ್ಟ್ರದ ಬಸವಾ | ಎಲ್ಲರ ನೆತ್ತಿ ಹಿಡಿವ ಬಸವಾ ||
ಕತ್ತಲೆಯಾ ಬತ್ತಲೆಯಾ | ಒಡಿಸುವ ಬಸವಾ ||೪||

ಭಾರತ ಶಿರಿ ಬಸವಾ | ನಮ್ಮಯ ನಾಡಿನ ಧೂರಿ ಬಸವಾ ||
ಮಾನ್ಯತೆಯಾ ಧನ್ಯತೆಯಾ | ಪೊಂದಿದ ಬಸವಾ ||೫||

ಅಮೃತಮುಲ ಬಸವಾ | ಅಮೃತದ ಮಳೆ ಸುರಿಸುವ ಬಸವಾ ||
ಜಯಬಸವಾ ಕೊಡು ಯಶವಾ | ಒಂದಿಸುವೆ ಬಸವಾ ||೬||

# ಭೂ ಸಂರಕ್ಷಣೆಯ ಲಾವಣಿ

ಚಾಲ—ಹ್ಯಾಂಗ ಬಳಕೀ ಮಾಡಬೇಕಣ್ಣಾ

ಒಡ್ಡು ಹಾಕು ಹೊಲಕೆ ನೀ ರೈತಾ | ಅದು ನಿನಗೆ ವಿಹಿತಾ
ಒಡ್ಡು ಹಾಕೋ ಹೊಲಕೆ ನೀ ರೈತಾ ||ಪ||

ಒಡ್ಡು ಹಾಕೋ ಹೊಲಕೆ ನೀ ಆ ಒಡ್ಡಿನನನುಭವ ಮಾಡಿಕೊ
ದೊಡ್ಡ ಮಳೀ ನೀರಡ್ಡಗಟ್ಟಿದ | ಒಡ್ಡಿನ ಹೊಲ ನೋಡಿಕೊ ||೧||

ಒಡ್ಡುಹಾಕಿದ ಹೊಲವು ಬಲು ಖಡಕೋ| ಅದಕಿಲ್ಲ ಕೆಡಕು ||
ಒಡ್ಡು ಹಾಕಿದ ಹೊಲದ ನೆಲ ತಲಕೊ | ಸುಳ್ಳಲ್ಲ ಶಿಳಕೊ ||
ಒಡ್ಡು ಹಾಕಿದ ಹೊಲದ ನೆಲವದು | ಗೊಡ್ಡು ಬೀಳದೆ ಬೆಳೆದು ||
ಪೀಕು ಅಡ್ಡಿಯಿಲ್ಲದೆ ನಿನಗೆ ಅದು ಬಲು | ದೊಡ್ಡ ಲಾಭವ ಕೊಡುವ
ದದಕೋ ||೨||

ಒಡ್ಡು ಹಾಕದ ಹೊಲವು ಬಲು ಹೀನಾ | ಹೊಲವೆ ಸಣ್ಣಾ ||
ದೊಡ್ಡ ಸರವುಗಳಿಂದ ಬಲು ಕ್ಷೀಣಾ | ಸುಳ್ಳಲ್ಲೊ ಜಾಣಾ ||
ಜಡ್ಡು ಆದವನಂತೆ ಬಲಹೀನಾ | ನೆಲವೆಲ್ಲ ನಿತ್ರಾಣಾ ||ಒಡ್ಡುಹಾಕಲು
ಹೊಲದರೆವೆದು | ಅಡ್ಡತಿಡ್ಡಾಗರಿದು ಹೋಗದು|| ಒಡ್ಡಿನಿಂತಾಗುವದು
ಹೊಲ ಸಮ | ತೆಗ್ಗು ದಿಬ್ಬಗಳೆಲ್ಲ ಹುಗಿದು ||೩||

ಒಡ್ಡುಹಾಕಿದ ಹೊಲದ ನೆಲಚಂದೊ | ಅದಕಿಲ್ಲೊ ಮುಂದು||
ಒಡ್ಡು ಹಾಕಲು ಆಗು ನೀ ಮುಂದು ||೪||

ಹೊತ್ತು ಗಳಿಯಲು ಬೇಡೊ ನೀ ವ್ಯರ್ಥಾ || ಸಿಗಲಾರದಿಂಥಾ
ಹೊತ್ತು ನಿನಗೆಂದಿಗೂ ರೈತಾ | ನೀ ಭಾಗ್ಯವಂತಾ || ನಿತ್ಯರೈತರಿಗಾಪ್ತ
ರಾಗಿಹ | ರುತ್ತುಮರು ನಿಜ || ರೈತ ಪ್ರಿಯರು ಉಕ್ತ ಕಾಲದೊಳ್
ಒದಗಿರಲು ಕ್ರಮ ಯುಕ್ತವಾಗಿ ನೀ ಬಿಡದಲೇ ಗಡಾ ||೫||

ಒಡ್ಡು ಹಾಕುವ ಕೆಲಸ ಮೊದಲಿನದೋ । ಸರಿಯಾಗಿ ಹೊಲದೊಳ್ । ಒಡ್ಡು ಹಾಕಿದ ಬಳಿಕ ಮತ್ತೊಂದು ಮತ್ಯಾವದೆಂದಸ। ದುಡ್ಡಿಯಿಂ ಗೊಬ್ಬರವ ಹೇರುವದು । ಸರಿಯಾಗಿ ಹರವುವದು ||೬||

ಒಡ್ಡು ಹಾಕಿದ ಹೊಲದೊಳೀತೆರ । ದಡ್ಡಿಗೊಬ್ಬರ ಹರವಿದಾಡೊಡೆ । ದೊಡ್ಡ ಬೆಳೆಯನೇ ಬೆಳೆದು ಗಳಿಲನೇ । ದುಡ್ಡಿನಾ ಮಳೀಗರೆವದದಕೋ ||೭||

ಶಗಣಿ ಗ್ವಾತವ ಕಳಿಯ ಬೇಡಿರೋ । ಕುಳ್ಳಚ್ಚಿ ಸುಟ್ಟು ಬೀಳುಗೆಡುವಿರೆಯ್ಯಾ । ಭೂಮಿಯನು । ಟೊಂಕ ಕಟ್ಟಿ ನಿಂತು ಚಿಪ್ಪಾಡಿದಂಟು ಬೂದಿ ಮಣ್ಣು ಬೆರಸಿ । ಕಾಂಪ್ರೋಸ್ಟಗೊಬ್ಬರಮಾಡು ಅಣ್ಣಾ। ತ್ವರಿತ ಬೆಳಿವುದು ಭೂಮಿ ಮುನ್ನಾ ||೮||

ನಟ್ಟು ಹೊಲದೊಳಗಿರಲು ಬಹು ಕೆಟ್ಟಾ ಅದು ನಿನಗೆ ನಷ್ಟಾ। ನಟ್ಟನಾ ಹೊಲ ಬೆಳೆಯುವದು ಕಷ್ಟಾ । ಹಿಡಿದಷ್ಟು ರೊಕ್ಕಾ ಕೊಟ್ಟುತಗಿಸಲು ಬೇಕು ಲಗು ನಟ್ಟಾ । ಕೈಬಿಟ್ಟರತಿಕೆಟ್ಟಾ । ತಟ್ಟನೇ ತಗಿಸೊಗಿಸು ನಟ್ಟನು । ನಟ್ಟು ಹೊಲದೊಳಗಿಟ್ಟು ಒಡ್ಡನು ಕಟ್ಟಿಗೊಬ್ಬರ । ಎಷ್ಟು ಒಗಿದರು ತಟ್ಟದೈಸುಖ ನಟ್ಟು ಕಳಿದು ||೯||

ತಿಳಿದ ಮಟ್ಟಿಗೆ ಪೇಳಿದೆನು ನಾನು । ಒಕ್ಕಲಿಗ ನೀನು ಹೊಲಸುಧಾರಣೆ ಮಾಡಿಕೊ ಇನ್ನು । ಸಲೆ ತಿಳಿಸಿರುವೆನು ಹೊಲ ಸುಧಾರಕವಿಧಾನವ ನಾನು । ಒಳಿತಾಗಿ ಎಲ್ಲವನು ಇಳಿಯೊಳು ವರ ಮುರಗೋಡಪುರದ । ಬಾಳಣ್ಣ ಪೇಳಿದ ಲಲಿತ ಪದಗಳ ಕಲಿತು ನಿನ್ನಯ। ಹೊಲದ ನೆಲ ಹದಗೊಳಿಸೋ ತ್ವರಿತಾ ||೧೦||

---

ರಾಗಿಯನು ತಿಂಬವನು ನೀರೋಗಿ ಎಂದೆನಿಸುವನು,
ರಾಗಿಯು ಭೋಗಿಗಳಿಗಲ್ಲ, ಬಡವರಿಗಾಗಿ
ಬೆಳೆದಿಹುದು ಸರ್ವಜ್ಞ.

# ಭಾರತದ ಭೂ-ಸಂಪತ್ತು

## ಲಾವಣಿ ಪದ್ಯ

ಭೂಮಿಯ ಭಕ್ತರೆದುರಿನಲಿ ಹಾಡುವೆನು ।
ಭರತಖಂಡದ ಭಾಗ್ಯದನಾಡು ॥
ಕಾಮಿತಾರ್ಥವನು ಕೊಡವ । ಕಲ್ಪತರು ನಾಮಾಂಕಿತ ಭಾರತನಾಡು॥
ಪೂರ್ವಕಾಲದಲಿಪುಣ್ಯಭೂಮಿ ಇದು । ಸ್ವರ್ಣ ಭೂಮಿ ಎನಿಸಿದ ನಾಡು॥
ಸರ್ವವಸ್ತುಗಳ ಜನ್ಮಭೂಮಿ । ಮಳೆ ಬೆಳೆ ಹೊಳೆ ಕಳಕಾಂತಿಯ ನಾಡು॥
ಮಣ್ಣಿನಲ್ಲಿ ಮನೆಮಾಡಿಕೊಂಡಿರುವ । ಚಿನ್ನರನ್ನ ಧಾನ್ಯದ ನಾಡು ॥
ಪುಣ್ಯವಂತ ಒಕ್ಕಲಿಗರು ಮಣ್ಣನು । ಚಿನ್ನರನ್ನ ಮಾಡಿದ ನಾಡು ॥
ಅನ್ನದಿಂದ ಬ್ರಮ್ಹಾಂಡ ವ ಸಲಹುವ । ಸರ್ವ ಮಾನ್ಯಹಿಂದೂ ನಾಡು॥
ಕಣ್ಣು ಮೋಹಿಸುವ ಸಸ್ಯ ಸಮೃದ್ಧಿಯ । ಮಣ್ಣು ನೀರು ಬೆರೆತಿಹನಾಡು॥
ಹಾಳಾದ ಹಂಪಿಯ ನಾಡು ಬೀಳಾದ । ಬಿಜಾಪುರ ಬೀಡು ॥
ಗೋಳ್‌ಗುಮ್ಮಟ ಮುಗಿಲ ತುದಿಗೂಡು ।
ಪ್ರಾಚೀನ ಶಿರಿಯ ನೆರೆನೋಡು ॥
ಭಂಗಾರದ ಭಾರತ ಸಿರಿಮಣ್ಣೊಳಗಿರುವದೆಂದು । ನಿಶ್ಚಯ ಮಾಡು ॥
ಭಾರತ ಭಾಗ್ಯವು ಭೂಮಿಯೊಳಿರುವುದು ।
ಕರ್ಮಯೋಗಿ ನೇಗಿಲಯೋಗಿ ॥
ತಾರತಮ್ಯ ತಿಳಿ ಭೂಮಿಯಾ ।
ಹೊಸ ಯೋಜನೆಯಲಿ ನೀ ಜಾಗ್ರತನಾಗಿ ॥
ಬೆಳೆಯ ಶಕ್ತಿ ತಿಳಿ ಮಣ್ಣಿನೊಳಗಿಡದೆ । ಕಳಿಯಬೇಡ ಮಣ್ಣನು ತ್ಯಾಗಿ॥
ಒಲಿದು ಮಾಡು ಒಕ್ಕಲುತನ ಮುಂದಿನ । ಜನ ಜೀವನ ರಕ್ಷಣೆಗಾಗಿ॥

ಬಡ್ಡ ಬಿದ್ದ ಎಮ್ಮಿ ಹಾಲು ಹಿಂಡುವದೇ ।
ಕೃಷಿ ಕರ್ಮವ ನೀನರಿದಾಗಿ ॥

ಮಬ್ಬನಂತೆ ಕೃಷಿ ಮಾಡಿದರಾಗದು । ಬೆಳಿಯದೆಂದು ಹೊಲತಾನಾಗಿ॥
ಗುಡ್ಡದಷ್ಟು ಗೊಬ್ಬರವ ಹಾಕಿದರೂ । ತೀಲಿ ಹೋಗುವದು ಜಾರಾಗಿ॥
ಒಡ್ಡು ಹಾಕು ನೀರಡ್ಡ ಗಟ್ಟು ಬೆಳೆ ಬರುವದು । ಹೊಲವದು ಹುಲಸಾಗಿ॥
ಒಡ್ಡಿನಲ್ಲಿ ನಿಜವಾಸ ಮಾಡಿಹಳು। ದುಡ್ಡಿನ ಲಕ್ಷ್ಮಿಯು ತಾನೀಗ ॥

ಸೊಡ್ಡು ಹೊಡಿದು ಹೊಲ ಬದಕು ಮಾಡಿ ।
ಹೊನ್ನಿನ ಮಳೆಗರೆರೈತನೆ ॥
ಭರತಖಂಡವಿದು ಸುರನಂದನವನ ।
ವೆನಿಸಲಿ ರೈತರ ದುಡಿಮೆಯಲಿಬೇಗ ॥
ಹರಿದು ಹೋದ ಶೀರಿ ಮರಳಿ ಬಂದು ।
ಮೆರಿಯಲಿ ಸೌಭಾಗ್ಯವತುಂಬುತಲಿ ॥

ಬನ ಸಿರಿಯಾಗಲಿ ಜನಬಿರಿಯಾಗಲಿ । ಧನ ಶಿರಿಯಾಗಲಿ ಕಂಡಲ್ಲಿ ॥

ಪಲಸು ದ್ರಾಕ್ಷಿ ತೆಂಗಿನ ಬಾಳೆಯ ।
ಬನಗಳು ಬೆಳೆಯಲಿ ಮರುಗಾಡಿನಲಿ ॥

★ ★ ★ ★ ★

## ಒಕ್ಕಲತನದ ಬಗ್ಗೆ ನಾಣ್ಣುಡಿಗಳು

೧ ಜೋಳಾ ಬಿತ್ತಿದ ನಲವತ್ತು ದಿವಸಕ್ಕ–ಎಡಿ ನಲ್ವವತ್ತು ದಿವಸಕ್ಕೆ ಹೊಡಿ। ನಲ್ವತ್ತ ದಿವಸಕ್ಕೆ ಕಡಿ

೨ ನೋಡದಲೆ। ಹೊಲ ಹೋಯಿತು ॥
ಮಾಡದಲೆ। ಮನಿ ಹೋಯಿತು ॥
ಕೇಳದಲೆ। ಸಾಲ ಹೋಯಿತು ॥

# ಎಲ್ಲರೂ ಎಲ್ಲ ವಸ್ತುಗಳೂ ಇರುವ ನಾಡಿನ ಲಾವಣಿ

ವಿಜಯ ನಗರದ ವಿಜಯದ | ದಶಿಯಿಂದ ||
ಪ್ರಜರನ್ನು ಹೆರದಿದ್ದಿ | ದ್ವಿಜರನ್ನು ಪೊರೆದಿದ್ದಿ ||
ಧ್ವಜವನ್ನು ಮೆರೆಸಿದ್ದಿ | ಸುಜನರ ಹೃದಯಮ್ಮಾ ||
ಭಜಪರಿಗೆ ನಿಜ ಸುಖಂ | ನೀಡಮ್ಮಾ ||
ಧನ್ಯ ಕನ್ನಡಂ ಧನ್ಯ ಕನ್ನಡಂ | ಧನ್ಯ ಕನ್ನಡಂ ||೧||

ಅರಿ ಸೌಂಹಾರರ ದುರಿತ ನಿವಾರರ | ಧರೆಯೊಳು ||
ಧೀರರ ಹರಿಹರ ಭಟರರ | ನಿರುತದಿ ಪೊರೆದೆದೆಮ್ಮಾ ||
ವರದ ಹಸ್ತ ಸಿರದ | ಮ್ಯಾಲಿರಿಸಿದೆಮ್ಮಾ ||೨||

ಕರಿಯು ತುರುಗ ರಥ | ಹಿರಿ ಕಾಲ್ಬಗಳ ||
ಮೆರಿವ ಸರ್ದಾರರ | ಅರಿತ ನಾಯಕರ ||
ನುರಿತ ವೀರರ ಕುರಿತು ಮಾಡದಿ | ಪ್ರೇಮಾ ||
ಸಮರ ಸಂಸ್ಕೃತಿಗೆ | ಇತ್ತೆ ಅಭವಾ ||೩||

ರನ್ನ ರಾಘವ ಹೊನ್ನ ಪಂಪರನ್ನ | ನಿನ್ನ ಲಕ್ಷ್ಮೀಶನ್ ||
ಚನ್ನ ಷಡಾಕ್ಷರಿ | ರನ್ನ ಪೊರದಿಯಮ್ಮಾ ಇನ್ನಮ್ಯಾಲ
ನಮ್ಮ ನೀ ಕಾಯಮ್ಮಾ ||೪||

ಅಲ್ಲಮ ಪ್ರಭುದೇವ | ಬಲ್ಲಿದ ಬಸವೇಶ ಮಧ್ವ ||
ರಾಮಾನುಜ ಅಕ್ಕಮಹಾದೇವಿಯರಮ್ಮಾ ||
ಅನುಭವ ಮಂಟಪ ರಚಿಸಿದೆಮ್ಮಾ ||೫||

ಕೆನಿಮುಸರವಲಕ್ಕಿ ನೆನಸಿ ತಯ್ಯಾರ ಮಾಡಿ ||
ಸಿರಸಿ ಬಾಳೀ ಹಣ್ಣ ಸುಲಿಸಿ ಸಕ್ಕರ್ಯಾಗ ||
ಕಲಿಸಿ ತುಪ್ಪದಲ್ಲಿ | ಬೆರಸಿದಂತೆ ಜನ್ಮಾ ||
ಕನ್ನಡದಲ್ಲಿ ತುಂಬಿ ಬಿಟ್ಟ ಬ್ರಮ್ಹಾ ||೬||

ಮುತ್ತಿನಂಥ ಜೋಳ ಉತ್ತಮ ಗೋದಿ ಭತ್ತ ||
ಅಂಬೇಮೋರಿ ಹೆತ್ತ ಹಸುಗಳಮ್ಮಾ ||
ನಿತ್ಯ ಹಾಲು ತುಪ್ಪ ತಿನಿಸಿದಮ್ಮಾ ||೭||

ರಸದ ಮೋಸಂಬಿ ರಸ ಸೂಸುವ ದ್ರಾಕ್ಷಿ ||
ವಿಶಾಲ ಬಾಳಿಯ ಹೊಸ ಬನಶಿರಿಯಮ್ಮಾ ||
ರಸಿಕರಿಗೆ ಮಾವು ತಿನಿಸಿದೆಮ್ಮಾ ||೮||

ಸಣ್ಣ ಶಾವಿಗೆಯ ಎಣ್ಣೆ ಹೋಳಿಗೆಯ ಚಿನ್ನಿಸಕ್ಕರಿಯ
ಸುಣ್ಣಗುಣಿಸಿದೆಮ್ಮಾ ಪುಣ್ಯವಂತಿ ನೀನೆ ಕನ್ನಡಮ್ಮಾ ||೯||

ಎರಡು ಕೋಟಿ ಜನ ಹರಿವ ಹಳ್ಳ ನದಿ ||
ಎರಿಯ ಮಣ್ಣಿನೆ ಸಿರಿಯು ನಿನ್ನದಮ್ಮಾ ||
ಧರಿಯ ಮೇಲೆ ಸರಿಯಗಾಣೇನಮ್ಮಾ ||೧೦||

   

೩ ಅಂಗೈಯ್ಯಂಗ | ಹೊಲ ಮಾಡಿದವರ ||
ಮುಂಗೈಯಾಗ | ಬಂಗಾರ ಖಡೆ ||

೪ ಚಿಟ್ಟೆ ಜೋಳಕ್ಕೆ ಕೂಲಿ ಹೋಗಿ | ಮುಟ್ಟೆ ಜೋಳಾ ಕೊಟ್ಟ
ಗಂಟ ಕಟ್ಟಿಸಿ ಕೊಂಡ್ಲಂತ

೫ ಬುಕ್ಕ ನೋಡಿ ಉಪ್ಪು ಖಾರಾ | ಹಾಕ್ ಗೊಡದ ||

# ಒಡ್ಡಿನ ವರ್ಣನೆ

## ಲಾವಣಿ ಪದ

ಒಡ್ಡಿನ ವಿಸ್ತಾರ ಚಿತ್ತಿಟ್ಟು ಕೇಳಿರಿ | ದೊಡ್ಡವರೆಲ್ಲರೂ ಕೂಡಿ ರಿಲ್ಲಿ ಒಡ್ಡಿನ ಅನುಭವ ಧಡ್ಡೇನು ಬಲ್ಲನು | ಬಲ್ಲವರುಂಟು ನಮ್ಮ ರೈತರಲಿ

ಒಡ್ಡಿನ ಲಾಭವು ದೊಡ್ಡದೆಂಬುವ ಮಾತು | ಸೊಡ್ಡು ಹೊಡಿದು ನಾ ಹೇಳುವೆನು ಒಡ್ಡಿನ ಉಪಯೋಗ ಬಣ್ಣಿಸಲಳವಲ್ಲ | ಸಣ್ಣದೊಡ್ಡ ಎಲ್ಲ ಹೊಲಗಳಿಗೆ ಒಡ್ಡು ಹಾಕದ ಹೊಲ ಎಷ್ಟಿದ್ದರೇನಯ್ಯಾ | ಮರಡಿ ಭೂಮಿಯಾಗಿ ಬರಡುವದು ಒಡ್ಡಿದ್ದ ಹೊಲವಂದು ಅಂಗೈಷ್ಟಿದರು | ಅಷ್ಟಸಂಪತ್ತಿನೊಳಿರಿಸುವದು ||೧||

ಒಡ್ಡು ಹೊಲದೊಳಗಿಲ್ಲ ದಿರಲಡ್ಡ ಉದ್ದಾಗಿ | ಹರಿದು ಕೂರಿ ಬಿದ್ದು ಸರುವಾಗುವದು ದೊಡ್ಡ ಸಣ್ಣ ಸರವು ಹೊಲತುಂಬ ಹರಿಯುತ್ತ | ಚಿನ್ನದಂತಾ ಮಣ್ಣು ಹೋಗುವದು ಹೆರತುಪ್ಪದಂತಿರುವ ತಿಳಿ ಮಣ್ಣು ಹಾಳಾಗಿ | ಹೊಲದ ನೆಲವೆಲ್ಲಾ ಗರಸಾಗುವದು ಸರಸಾದ ಹೊಲವೆಲ್ಲಾ | ಗರಸಾದ ಬಳಿಕಿನ್ನೂ ಹೊರಸೀನ ಸರತಿಯೆ ರೈತನದು ||೨||

ಹೊರಸೀನ ಸರತಿಯನು ತಪ್ಪಿಸಿಕೊಳ್ಳುವಕಾಲಾ | ಒದಗಿ ಬಂದಿರುವದು ರೈತರಿಗೆ | ಗರಸಿನ ಹೊಲಗಳೆಲ್ಲಾ | ದುರಸ್ತಿ ಮಾಡುವ ಕಾಲ | ಒದಗಿ ಬಂದಿರುದು | ರೈತರಿಗೆ ||೩||

ಬಲಸೀದ ಹೊಲದಿಂದ ಒಕ್ಕಲತನವೆ | ಚಂದಾಗುದೆಂದು ವಿಚಾರಿಸಿರಿ ಹೊಲದೊಳಗಿನ ತಿಳಿ ಮಣ್ಣು | ಕಾಪಾಡಿಕೊಂಡು ನೆಲ ಸಮ ನೀವು ಇಂದೂ ಮಾಡಿಕೊಳ್ಳಿರಿ | ಬಿತ್ತಿ ಕೊಳ್ಳಿರೋ ನೀವು | ಬೇಕಾದ ಪೀಕನ್ನು ||೪||

ಬೀಗಿ ಬೆಳೆಯಿರಿ ನೀವು ಜೋಳಾ ಗೋದಿಯನ್ನು । ಬಿತ್ತಿದ ಪೀಕ ಅದು । ಹುಸಿಯಾಗಲಾರದು ಉತ್ತುಮ ತರ ಪೀಕೆನಿಸುವದು ||೫||

ಅಲ್ಪ ಮಳೆ ಬೇಸಾಯ । ಪದ್ಧತಿಯನ್ನೊಳಗೊಂಡು ಸ್ವಲ್ಪ ಮಳೆಯಿಂದಲೆ । ಬೆಳೆದುಕೊಂಡು ಅಲ್ಪಾವಿಧಿಯಲ್ಲೇ ಅಕ್ಕರತಿಯಿಂದಲೇ । ಸಕ್ಕರೆಯ ಸವಿಯಾಗಿ ಬಾಳೀರಿನ್ನೂ ||೬||

* * * * *

## ಶೀಗಿಹುಣ್ಣಿವಿ ಬೆಳಗಾದರೆ ಬಂತ

( ನಾರೀ ಹೊಲಕ್ಕೆ ಹೋಗುವದು )

ಮಸರು ಕಲಿಸಿದ ಬುತ್ತಿಯು । ಬಾಳ್ ಕಲಸ ||
ಊಟಕ ಬಲು । ಸೊಗಸ ||
ಹಸನಾಗಿ ಗಜ್ಜರಿ ಬದನಿಕಾಯಿ । ಬರತ ||
ಹೊಲದಾಗ ಉಣ್ಣಾಕ ಬಲು ಹರುಷ ||೧||
ಸಜ್ಜಿ ರೊಟ್ಟಿ ಪುಂಡಿಪಲ್ಲೆ ರುಚಿಯನೋಡ ಫಾಸ ||
ಉದರಬ್ಯಾಳಿ ಕೊರದಿಟ್ಟ ಗುಗ್ಗರಿ । ಅರದಖಾರ ಖಾಸ ||
ಹಸರನುಟ್ಟ ಬಸವಂತಿ ನಿಂತಾಂಗ । ಬೆಳಿಗಳ ಶ್ರೀಂಗಾರ ||
ಗುರೆಳ್ಳ ಅಗಸಿ ಅವರಿ ಬಳ್ಳಿ । ಬೆಳೆದಾವ ಭಂಗಾರ
ಬಿಳಿಯ ಬಣ್ಣದ ಜತಿಯಹೋರಿ ಹೂಡಿದ ಚಕ್ಕಡಿಗೆ ||
ಲಗ ಬಗಿಯಿಂದಲಿ ಹೋಗುನುನಡಿ ಹೊಲದ ಕಡೆಗೆ ಜೋಕೆ ||
ಬಿಳಿಜೋಳ ಬೆಳಿಸಿ ಗೋದಿಯ । ಉಮ್ಮಿ ಮೂಜಿಲಿ ತಿನುವಂತಿ ||
ಉತ್ತಮ ಮಕ್ಕಳ । ಹಡಿವಂತಿ ||
ಹತ್ತಿಯಬಿಡಿಸಿ । ಹೊಲಮನೆ ಗಳಿಸಿ ।ಸುಖದೊಳಗಿರುವಂತಿ ||
ಉತ್ತಮ ಕಾರ್ಯಕ್ಕೆ । ಹೆಚ್ಚಿನ ಸಿರಿಯನು ||
ದಾನ ಮಾಡವಂತಿ।ಒಕ್ಕಲವಂತಿ। ನೀ ಸಮರಂತಿ ಲೋಕದಿ ಪ್ರಖ್ಯಾತಿ||
ಅಕ್ಕರದಿಂದಲಿ ಹಾಡುತ ನಡಿಯೇ ಬಸವಣ್ಣನ ಕೀರ್ತಿ

# ಭಗಿನಿಯರಿಗೆ ಉಪದೇಶದ ಲಾವಣಿಯು

ಹಡದ ತಾಯಿಗಳ ಮುಂದೆ | ದೃಢವಾದ ಮಾತ ಒಂದ ಒಡದ ಹೇಳತೇನ ಕೇಳ್ರಿ ಸರ್ವರೆಲ್ಲಾ | ಭಾಗ್ಯದ ಲಕ್ಷ್ಮೀ ನೀವೇ ವಿಧೀ ಲಕ್ಷ್ಮೀ ನೀವೇ ನಿಮ್ಮಿಂದೇ ನಡದೈತಿ ಜಗವೆಲ್ಲಾ ||ಪ||

ಗಂಟೆಮಾರಿ ಹಾಕಿದವರು | ಎಂಟು ದಿವಸ ತಗುವದಿಲ್ಲಾ | ಬಂಟ ಗಂಡಸರ ಮಾಡತಾರ ಚಿಂತೆ | ತಿಂದ ಕೂಳ ಅವರ ಮೈಗೆ ಹತ್ತುವದಿಲ್ಲಾ | ನೊಂದಿ·ನೊಂದಿ ಆಗತಾವ ಫಜೀತಿ | ಹುಳಾ ಹುಳಾ ಮಾರಿ ನೋಡಿ ಹೇಳತಾರ ಯಾರ ಮುಂದ | ಗಳೇಕ ಹೋಗತಾವ ಎತ್ತಿನ ಬೆನ್ನ ಹತ್ತಿ | ಹೊಲದಿಂದ ತಿರುಗಿ ಬಂದು ತೊಲಿಬಾಕಲ ದಾಗ ಕಾಲ ಇಡುದರೊಳಗ | ನೆನಪ ಆಗೇತಿ ಅವನ ಹೆಂಡತಿಯ ಮೋತಿ | ಎತ್ತ ಕಟ್ಟಿ ತುದಿಗಟ್ಟೆಗೆ ಕ್ಷಣಾ | ಕುಡ್ರುದರೊಳಗ ವಟ ವಟ ಪಿಟಿ ಪಿಟಿ ಸುರು ಆಗೇತಿ ಚಟಿಗಿ ಮುಚ್ಚಳಿಕೆಯಲ್ಲಾ ಫಟಕಿ ಬ್ಯಾನಿ ಬಂದಾಂಗ ಆಯಿತು | ಪಟಾ ಪಟಾ ಒಡಿತಾಳು ದುರ್ಗಾದೇವತಿ | ನಮ್ಮ ಅಪ್ಪ ಕೊಟ್ಟ ಕುಂತ ಈ ಮನಿ ಯಾವಲ್ಲಿತ್ತ | ಸಾವು ತನಕ ಅವನ ಹೆಣಕ ಅಳುದಾಗೇತಿ | ಬಾವಾನ ಮನಿಯಾಗ ಒಂದ ಭಾಂಡೇ ಇರಬಾರದೇನ ಮಣ್ಣ ಕೊಡದ ಕೂಡ ನನ್ನ ಜನ್ಮ ಆಗೇತಿ ||೧||

||ಚಾಲ|| ಇಂಥಾದರ ಸಲುವಾಗಿ ವದಿರ್ಯಾಡಿ ತೆಗಿಯ ಬ್ಯಾಡ್ರಿ ಜಗಳಾ|
ಅದರಿಂದ ಆಗೂದು ನಿಮ್ಮ ಮನಿತಾನ ಎಲ್ಲ ಹಾಳಾ ||
ಕಸಾಕಡ್ಡಿ ತೆಗೆದು ಒಗೆದು ಮನಿ ಇಡಬೇಕ್ರಿ ಝುಳಝುಳಾ |
ಅದರಿಂಧ ಆಗತಾವ ನಾನಾ ಪ್ರಕಾರದ ಹುಳಾ ||
ಸ್ವಚ್ಛತಾ ಇಲ್ಲದ್ದಕ್ಕ ರೋಗಾದಿಗಳು ಭಾಳಾ |
ಆರೋಗ್ಯಶಾಸ್ತ್ರದಂತೆ ನಡಿಯಬೇಕು ಬಾಳ ನಿವಳಾ ||

ಮಣ್ಣ ಮಡಕಿ ಇದ್ದರೇನು ಬಿಳಿ ಭಾಂಡೆ ಇದ್ದರೇನು ।
ತೊಳೆದು ಸ್ವಚ್ಛ ಮಾಡಬೇಕರಿ ಅವಗಳನ್ನೆಲಾ ॥
ಭಾಗ್ಯದ ಲಕ್ಷ್ಮೀ ನೀವೇ ವಿಧಿ ಲಕ್ಷ್ಮೀ ನೀವೇ ।
ನಿಮ್ಮಿಂದ ನಡದೈತಿ ಜಗವೆಲ್ಲಾ ॥೨॥

ಹೊಲದಿಂದ ಗಂಡ ಬಂದರ । ಸ್ವಲ್ಪ ನಕ್ಕ ಬಿಡಿರೆವ್ವಾ ಹೋಳಿಗಿ ಉಂಡಾಂಗ ಆಗತೈತಿ ಅವರಿಗೆಲ್ಲಾ । ಹ್ಯಾವಕ್ಕ ಆಗಿ ಸುಮ್ಮ ಇದ್ದರ ತಾವ ಮಾತಾಡಸ್ತಾರ ಕರುಣಾ ಇರಬೇಕರೆವ್ವಾ ಅವರ ಮ್ಯಾಲ। ಊಟಕ್ಕ ಕುಂತಾಗ ಎಟ ತ್ರಾಸ ಮಾಡಬಾರದು । ಪ್ರೇಮದಿಂದ ನೀಡಬೇಕ ತಾಯಿ ಹಂಗ । ಗಂಡ ಉಣ್ಣುವದಕ್ಕಿಂತಾ ಮೊದಲು ನೀವೇ ತಿಂದ ಕುಂತ್ರ ಆಯುಷ್ಯ ಕಮ್ಮ ಆಗೂದು ನಿಮಗ । ಗಂಡನ್ ನಿಂದಾ ಆಡಿದವರು । ಹಂದಿ ಜನ್ಮಕ್ಕ ಹುಟ್ಟತಾರು ಎಂದ ಅಂದರ ಮುಂದಿನ ಜನ್ಮದಾಗ । ಮದವಿ ಗಂಡ ಮರ ಮರ ಮರಗಿದರ । ತಿರ ಕೊಂಡ ತಿನ್ನುದು ಆಕಿ ಭೋಗದಾಗ । ಪತಿಯಿಂದ ಸಂತಾನ ಪತಿಯಿಂದ ಬಹುಮಾನ । ಪತಿ ಸೇವಾ ಮಾಡಿರೆವ್ವಾ ಕ್ಷಿತಿಯೊಳಗ । ಹುಚ್ಚ ಗಂಡನ ಕೂಡ ಮೆಚ್ಚಿ ನಡಕೊಂಡಲ್ಲಿ । ಕೀರ್ತಿ ಬಂತ ಹೇಮ ರಡ್ಡಿ ಮಲ್ಲಮ್ಮಗ । ನಿಮ್ಮಕಿಂತ ಹಿರಿಯರಿಗೇ ನಡಿಯಬೇಕು ಸಿರಬಾಗಿ। ಅತ್ತಿ ಮಾವ ಭಾವ ಅತ್ತಿಗೆ ನಾದಿನಿಯರಿಗೆ । ಗುರು ಹಿರಿಯರ ಬರ ತಿರತಾರ ಕೇಳಿರೆವ್ವಾ ನಿಮ್ಮ ಮನೀಗ । ಸರಳ ಸ್ವಭಾವದಿಂದ ಮರ್ಯಾದಿ ಕೊಡಿರೆವ್ವಾ ಅವರಿಗೆ ॥೩॥

ನೆರೆ ಹೊರಿ ಹೆಣ್ಣು ಮಕ್ಕಳ ಕೂಡ ಪ್ರೀತಿ ಬೆಳಿಸಿರಿ ಹೊಸದಾಗಿ। ಸಮಾಧಾನ ಗುಣದ ಮೇಲೆ ಪೂರ್ಣ ಇರಬೇಕ ನಂಬಿಗೆ ॥ಅ. ಪ.॥

ಅನ್ನದಾನ ವಸ್ತ್ರದಾನ ಕನ್ಯಾದಾನ ಭೂದಾನ ಎಲ್ಲಕ್ಕೂ ಹೆಣ್ಣು ಮಕ್ಕಳಿಗೆ ಸಮಾಧಾನ ಮೇಲಾ । ತಾಯಿ ಅಂತ ಮಕ್ಕಳಂತ ಹೇಳ

ತಾರ ಗಾದಿ ಮಾತ | ನೋಡಿಕೊಂಡು ಹಡಿರೆವ್ವಾ ಮಕ್ಕಳನಾ | ವರುಷ ಕ್ಕೊಂದರಂತೆ ನೇಮದಿಂದ ಹಡಿಯಬ್ಯಾಡ್ರಿ | ಹತ್ತ ಹಡಿಯುದಕಿಂತ ಒಂದ ಮುತ್ತ ಹಡಿಯಬೇಕ ವಿವೇಕ ಆನಂದನಂಥ ಪಂಡಿತನ | ಬಯಕಿ ಹತ್ತಿದಾಗ ಚಲೊತಿನಸ ತಿಂದರ | ಹುಟ್ಟತಾವ ಸಕಲ ಗುಣ ಸಂಪನಾ | ಬೂದಿ ಕಣ್ಣಿ ಶೋಧ ಮಾಡಿ ದಾದ ಇಲ್ಲದ ತಿಂತೀರಿ | ಗೋದ್ಯಾಗಿನ ಹಳ್ಳಾ ಸಣ್ಣ ಎರಿಮಣ್ಣಾ | ಬಾದ ಹುಡುಗೋರು ಹುಟ್ಟತಾವ | ಹಾದಿ ಬಿಟ್ಟ ತಿರಗತಾವ | ಖಾದಿ ಹಾಕುದಿಲ್ಲ ಆಗತಾವ ಕ್ವಾಣಾ | ಶ್ರೇಷ್ಠತ್ವ ಇರುವದಿಲ್ಲಾ | ಹುಟ್ಟಿದ ಹತ್ತು ವರ್ಷದಾಗ ಖೊಟ್ಟಿ ಗುಣ ಕಲಿತಾವ ಘಟಿಂಗತನಾ | ರೊಟ್ಟಿ ಕೆಡಿಸುವ ಮಕ್ಕ ಳಿವರು ನಿಷ್ಠಾವಂತರೆಲ್ಲರವ್ವಾ ಭ್ರಷ್ಟರಿಂದ ರಾಷ್ಟ್ರಕ್ಕ ಅಪಮಾನ | ಇಂಥಾ ರಾಷ್ಟ್ರಘಾತಕರಿಂದ ದೇಶವೆಲ್ಲಾ ಅಳಿಗಾಲ | ಶಿವಾಜಿಯಂಥವ ರನ್ನ ಹಡಿದವರಿಗೆ ಬೀಳತೇವರಿ ಕಾಲಾ | ಕಿತ್ತೂರ ಚೆನ್ನಮ್ಮನಂಥಾ ಹೆಣ್ಣು ಮಕ್ಕಳು ಈಗ ಯಾರು ಇಲ್ಲಾ | ನೆನಸಿಕೊಂತು ಕೂಡ್ರುವ ದಾಯಿತು ಹಿಂದಿನವರನೆಲ್ಲಾ | ಈಗಿನವರು ಕಲಿತಾರು ಮಾಡಲಾಕ ಒಣ ಡೌಲಾ | ಡೌಲ ಬಿಡರಿ ಇನ್ನ ಮ್ಯಾಲ | ಹಾಳಾಯಿತು ನಮ್ಮ ನಾಡೆಲ್ಲಾ | ಮಂದಿಗೆ ಬುದ್ಧಿ ಹೇಳಿ | ತಂದ ಹಾದಿಗಚ್ಚುವ ತುಂಗಳ ಗೌಡನ ಕವಿ ಅಸಲಾ ||೪||

  

ಸಂಗೀತವಿಲ್ಲದ ಹೃದಯ
ಮೋಸದಿಂದ ಕೂಡಿರಬೇಕು

— ಷೆಕ್ಸಪಿಯ

ನಡೆ ನೃತ್ಯವಾಗಬೇಕು
ನುಡಿ ಸಂಗೀತವಾಗಬೇಕು

— ಶ್ರೀ ಟಾಗೋರ

# ಲೇಸು ಯಾವದು

ಕರಿಯಾಗಿ ಕಬ್ಬು ಕಡಿಯ ಬಾರದು । ಇರವ್ಯಾಗಿ ಸಕ್ರೀ ಮೆಯುದು ಲೇಸು ॥ ಅರಿತು ಶ್ಯಾಣಾರಾಗಿ ಹೇಳುವದಕ್ಕಿಂತಾ । ಅರೇದ ದಡ್ಡರಾಗಿ ಕೇಳುದು ಲೇಸು ॥ ಹೆಡ್ಡರ ಸೇವಾ ಮಾಡುದುಕಿಂತಾ । ಗುಡ್ಡಕ ಕಲ್ಲು ಹೊರುವುದು ಲೇಸು ॥ ಧಡ್ಡರ ಬೆನ್ನಾ ಬೀಳುವದ ಕಿಂತಾ । ಕುಡ್ಡನ ಕೈಯ್ಯಾ ಹಿಡಿವುದು ಲೇಸು ॥ ಬಂಗಾಲಿ ವಿದ್ಯಾ ಕಲಿಯುದುಕ್ಕಿಂತಾ । ಅಂಗಳ ಕಸಬರಿಗಾಗುದು ಲೇಸು ॥ ಹಂಗಿನ ಬಿಸಿ ಅನ್ನಾ ಉಂಬುದುಕಿಂತಾ । ತಂಗಳ ಭಕ್ಕರೀ ತಿಂಬುದು ಲೇಸು ॥ ದುರ್ಜನರ ಸಂಗಾ ಮಾಡುದುಕಿಂತಾ । ಸಜ್ಜನರ ಕೂಡಾ ಜಗಳವು ಲೇಸು ॥ ಅಜ್ಜಗಳ್ಳರಿಗಾಲು ಹಣಿಸುದುಕಿಂತಾ। ಮಜ್ಜಿಗೀ ಒಳ್ಳೇಯವರಿ ಗೂಣೂಸುದು ಲೇಸು ॥ ದಾನ ಹೀನರಿಗೆ ಕೊಡುವದುಕಿಂತಾ ಜೀನ ನಾಗಿ ಗಳಿಸಿ ಇಡುವದು ಲೇಸು ॥ ಮಾನಗೇಡಿಯಾಗಿ ಬಾಳುವದಕಿಂತಾ। ಜ್ಞಾನಿಅನಿಸಿಕೊಂಡು ಸಾವುದು ಲೇಸು ॥ ಉದ್ದ ನೀರಿಗೋಗಿ ಮುಳುಗೂ ದುಕಿಂತಾ । ಇದ್ದ ನೀರಿನಲ್ಲಿಯೇ ಸ್ನಾನವು ಲೇಸು ॥ ಬುದ್ಧಿಗೇಡಿ ನೆರಿ ಇರುವದಕಿಂತಾ । ಎದ್ದನಾಡ ಮ್ಯಾಲ ಹೋಗುದು ಲೇಸು ॥ ದುರುಳರ ತೊತ್ತಾಗಿ ಇರುವದಕಿಂತಾ । ಕೊರವರ ಕತ್ಯಾಗಿ ಹೊರುವದು ಲೇಸು ॥ ಪ್ರೀತಿ ಮಾಡಿ ವಿಷ ಎರಿಯುದಕಿಂತಾ । ಬಡದ ಅಮೃತಾ ಸುರುವುದು ಲೇಸು ॥ ನೀತಿ ಚಾಂಡಾಲನ ಉಪಕಾರಕಿಂತಾ ಜ್ಯಾತಿ ಚಾಂಡಾಲನ । ಅಪಕಾರ ಲೇಸು ॥ ಬಾಳೇಗೇಡಿಗಾಳಾಗುವದಕ್ಕಿಂತಾ ತ್ವಾಳಿನ ಬಾಯಾಗ। ಸಿಗುವದು ಲೇಸು ॥ ಕೀಳನ ಕೊಟ್ರ್ಯಾಗ ಇರುವದಕ್ಕಿಂತಾ। ಬೀಳಾಗ ಗುಡಿಸಲಾ ಹೊಡಿಯುದು ಲೇಸು ॥ ಪಕ್ಷಕಟ್ಟಿ ಹರಕೊಂಬು ದಕಿಂತಾ। ಬಿಕ್ಷ ಬೇಡಿ ತಿರಕೊಂಬುದು ಲೇಸು ॥ ಸಾಕ್ಷಿ ಹೇಳಿ ಹೊಟ್ಟೆ

ಹೊರುವುದುಕ್ಕಿಂತಾ | ಶಿಕ್ಷಾ ಬಿದ್ದು ಜನ್ಮಾ ಹಾಕುದು ಲೇಸು || ಬಾಹಳ ಓದಿ ವಾದ ಮಾಡುದಕ್ಕಿಂತಾ | ಹಾದಿ ಬಿಟ್ಟ ಅಡವಿ ತುಳಿವುದು ಲೇಸು || ಭೇದ ಭೋಧವನು ತಿಳಿಯುವದಕ್ಕಿಂತಾ | ಜಾದು ವಿದ್ಯೆಗಳ ಕಲಿಯುವುದು ಲೇಸು || ಯರವಿನ ಅರವಿ ಹೊರುದುಕ್ಕಿಂತಾ | ಬರೇ ಮೈಲೆ ತಿರುಗುದು ಲೇಸು || ಬರೇ ಬ್ರಾಂತಿ ಹೇಳಿ ಸೊಂಮುದುಕ್ಕಿಂತಾ | ಗುರು ರುದ್ರಗ ಪೊಂದುದು ಲೇಸು ||

○ ○ ○ ○ ○

# ಎಲ್ಲ ಕಾಯುದ ಗುಣಗಳನ್ನು ಮನುಷ್ಯನಲ್ಲಿ ಕಾಣವ ಬಗ್ಗೆ ಲಾವಣಿಯು

ಎಲ್ಲ ಕಾಯಿಗಳು ವ್ಯರ್ಥೋರ್ ತಮ್ಮಾ | ಮರ್ತ್ಯದೊಳಗೆ ದೊಡ್ಡ ಪ್ರಾಣಕಾಯಿ | ಬೇಗ ಬೆಳಗ ನಿತ್ಯ ಬೇಕಾಗತೈತಿ | ಬೆಂಕಿ ನೀರ ಜೋಳ ಉಪ್ಪ ಮೆಣಸಿನಕಾಯಿ | ಸೃಷ್ಟಿಯೊಳಗೆ ಶಿವ ಹುಟಶ್ಯಾನ ತಮ್ಮಾ | ಶ್ರೇಷ್ಠವಾದ ನರದೇಹ ಹಸೀಕಾಯಿ | ಭರವಸವಿಲ್ಲ ಬಾಳ ದಿನಾ ಇರೂದಲ್ಲ | ಭಾವದೊಳಗ ನಿಜ ಭಕ್ತಿ ಕಾಯಿ | ಆಕಾರದೊಳಗ ಅಕಲದ ಬಳ್ಳಿ | ಅರ್ಥ ಅನುಭಾವದ ಅಬರೂ ಕಾಯಿ | ಮರ್ತ್ಯಲೋಕದಾಗ ಮಾಯದ ಬಳ್ಳಿ | ಮಾನುಳ್ಳ ಮನುಷ್ಯನ ಮಾನಾಕಾಯಿ | ಕಲಿಯುಗದೊಳಗೆ ಕಪಟ ಬುದ್ಧಿ | ಕಹೀ ಬಳ್ಳಿಗೆ ಬಾಳ ಮಕ್ಕಿಕಾಯಿ | ಸಮಜ ಗುಣಾ ಸವಿಬಳ್ಳಿಗೆ ಕಾಯಿ ತುಸು | ಸರ್ವರಿಗೆಲ್ಲ ಸವತಿಕಾಯಿ| ತುದಿ ಮೇಲಿನ ಕಾಯಿ ತುಂಬುಚ್ಚಿ ಬಿದ್ದರ | ನೆಚ್ಚಿಕಿಲ್ಲ ಒಂದು ಕಂಚೀಕಾಯಿ | ಮಣ್ಣಿನಕಾಯಿ ಕಣ್ಣಿಗೆ ಚಾಯಿ | ನುಣ್ಣಗಿದ್ದರೇ ಎಲ್ಲ ಒಂದ ನುಗ್ಗೀಕಾಯಿ | ಸೊಟ್ಟ ದೇಹವಿದು ಘಟ್ಟ ಅನ್ನಬ್ಯಾಡ್ರಿ |

ಕೆಟ್ಟ ಹೊದಾಂಗ ಬಂದ ಪುಟ್ಟಿಕಾಯಿ | ಖೊಟ್ಟಿ ಗುಣಾ ತನ್ನ ಹೊಟ್ಟಿ ಯೊಳಗಿಟ್ಟುಕೊಂಡು | ಮಾತನಾಡು ಗುಣಾಒಂದ ಬೇವಿನಕಾಯಿ |

ತನಗೆ ಬೇಕಾದ ಮಾತ ಬೆಲ್ಲದಕ್ಕಿಂತಾ ಸವಿ | ಬಲ್ಲವರಿಗೊಂದು ನೆಲ್ಲಿಕಾಯಿ| ಬಿಂಬದೊಳಗೆ ಶಿವಸಂಬನಸ್ಮರಣೆ| ನಂಬಿದವರಿಗೆ ಒಂದು ನಿಂಬಿಕಾಯಿ | ತಾ ಉತ್ತಮನಾದರ ಊರೆಲ್ಲ ಉತ್ತಮ | ಉಪಸಾಕ್ಷಿಗೆ ಬೇಕ | ಉಪ್ಪಿನಕಾಯಿ | ಹಸೀದ ಬೀಸೀದ ಅಟ್ಟ ಸುಟ್ಟ ತಿನ್ನುದ | ಚಲು...ಾಳ ಮಾಳಾಪುರದ ಬದನಿಕಾಯಿ | ಆದಿ ಬ್ರಮ್ಹನ ಅಂತ: ಕರುಣದಿಂದ ಆತ್ಮಾರಾಮ | ಜೀವ ಅಂಜುರಿಕಾಯಿ ನಿಜಗುಣ ನೀರಲ ಕಾಯಿ ಬಾಳೇವಂತ | ಬಾಳೇಕಾಯಿ ಗಜಿಬಿಜಿ ಗುಣಸೌಳ ಗಜರಿ ಕಾಯಿ | ಆಗುವ ಕೆಲಸಕ್ಕ ನೀರ ಹಚ್ಚು ಮನುಷ್ಯನ | ಹೊಲಸ ಗುಣಾ ಒಂದು ಹಲಸಿನಕಾಯಿ | ಗೋಪಾಳ ದುರದುಂಡಿ ತೋಡ ಹಾಡುವಲ್ಲಿ ನಾಡ ವ್ಯಾಲ ಅವರ ಹೆಸರ ಹಸರಕಾಯಿ | ಹಂಗೂ ಹಿಂಗೂ ಕಾಯಿ | ಹಂಗಾರ [illegible] ಕಾಯಿ | ತೇರದಾಳ ಪ್ರಭೂಗೊಡಿ ಎರಡ ಟೆಂಗಿನಕಾಯಿ|

§ † § †§† † §

## " ಹಿಂಡಿ ಗೊಬ್ಬರ "

ಚಾಲ—ಬೋಧಿಸು ಗುರುದೇವಾ

ಗೊಬ್ಬರವನು ಹಾಕಿ ಬೆಳಿಸೋ |
ಅಬ್ಬರದಿಂದಲಿ ಬರುವದು ಬೆಳೆಯು ||
ಶಗಣಿಯ ಗೊಬ್ಬರ ಅಗಣಿತ ಸಿಗುವದು |
ಅಗಿಯ್ಯೆ ಕುಣಿಯನು ಹುಗಿಯ್ಯೆ ಕಸವನು ||
ಹಿಂಡಿಯ ಗೊಬ್ಬರಾ ಗಂಡವ ಬೆಳಿವುದು |
ಚಂಡಿನ ಸಮ ತೆನಿ ದುಂಡಗೆ ಬರುವುದು ||
ಮಿಶ್ರಣ ಗೊಬ್ಬರ ಕೃಷಿವಲರಿಗೆ ತಾ |
ಸೂಕ್ರಯದಿಂದಲಿ ಲಭಿಸದು [illegible]ರುತಾ ||

ತ್ವರೆಮಾಡಿರಿ! ಅಚ್ಚಿನಲ್ಲಿವೆ!!



— ಹುಕ್ಕೇರಿ ಬಾಳಪ್ಪನವರ —

## ಮುಂಬರುವ ಹೊಸ ಕೃತಿಗಳು

★ ಭಾರತ ಯಾತ್ರಾದರ್ಶನ

★ ನಾಡಿನ ವೈಶಿಷ್ಟ್ಯಗಳು

★ ರಾಷ್ಟ್ರೀಯ ಪದಗಳು

★ ದೇವಗೀತೆ

★ ಬಾಳಗೀತೆ

ವಿಳಾಸ

ಶ್ರೀ ಬಾಳಪ್ಪ ವೀರಭದ್ರಪ್ಪ ಹುಕ್ಕೇರಿ,
ನೆಹರು ಮಾರ್ಕೆಟ, ಧಾರವಾಡ.